To
The Bride & Bridegroom,
May Heaven's Choicest Blessings
be showered on you both in plenty
for
Healthy, Happy, Prosperous, Long &
Fruitful Wedded Lives, is the
earnest prayer to the Almighty,
of
Smt. Umabai A. Nadkarni,
&
Sri Anantrao K. Nadkarni,

# ಪರಾವಿದ್ಯಾ

ಗ್ರಂಥಕರ್ತ:

ಕುಬೇರ ಆನಂದರಾವ್

A. K. Nadkarni
31.3.72.





1951

# ಸಹೃದಯರಿಗೆ

ನಾನು ಸಂಸ್ಕೃತ ಶಾಲೆಯಲ್ಲಿ ಕಲಿತವನಲ್ಲ. ನನ್ನ ಗ್ರಂಥಸಂಗ್ರಹವೂ ಅಷ್ಟೊಂದು ಮಹತ್ತರದ್ದಲ್ಲ. ನನಗೆ ಯಾವ ಡಿಗ್ರಿಯೂ ಇಲ್ಲ. ದೊಡ್ಡ ದೊಡ್ಡ ಸಾವಂತರು ಗ್ರಂಥಗಳನ್ನು ಬರೆದು ಪದಕಗಳನ್ನೂ, ಪದವಿಯನ್ನೂ ಹೊಂದಿ ಪ್ರಖ್ಯಾತಿಯನ್ನು ಪಡೆಯುತ್ತಾರೆ, ಮತ್ತು ಯಥೇಷ್ಟ ಧನಸಂಪಾದನೆಯನ್ನು ಮಾಡಿ ಕಾಮಿನಿ, ಕಾಂಚನ, ಕೀರ್ತಿ ಈ ಮೂರು ಮಾಯೆಯ ಮೂರ್ತಿಗಳಿಗೆ ಬಲಿಬೀಳುತ್ತಾರೆ. ದೊಡ್ಡ ವಿಶಾಲವಾದ ರೆಕ್ಕೆಗಳಿರುವ ರಣಹದ್ದುಗಳು ಆಕಾಶದಲ್ಲಿ ಬಹು ಮೇಲಕ್ಕೆ ಹಾರಿ ಪವಿತ್ರ ವಾತಾವರಣದಲ್ಲಿ ರೆಕ್ಕೆಗಳನ್ನು ಪಸರಿಸಿ ಚಕ್ರಾಕಾರವಾಗಿ ತಿರುಗುತ್ತವೆ. ಆದರೆ ಎಲ್ಲಿಯಾದರೂ ನಾಯಿಯು ಕೊಳೆತ ಶವವನ್ನು ಕಂಡೊಡನೆ ಕೆಳಕ್ಕೆ ಇಳಿದು ಅದನ್ನು ಭುಂಜಿಸಲಾರಂಭಿಸುತ್ತವೆ. ನೊಣ ತನ್ನ ಚಿಕ್ಕ ಪಕ್ಕಗಳಿಂದ ಅಲ್ಪಸ್ವಲ್ಪ ಹಾರಿ ಒಮ್ಮೆ ದೇವರ ನೈವೇದ್ಯಕ್ಕೆ ಇಟ್ಟ ಪಕ್ವಾನ್ನದ ಮೇಲೆಯೂ, ಮತ್ತೊಮ್ಮೆ ಮಲದ ಮೇಲೆಯೂ ಕೂತು ಯಥೇಷ್ಟ ತಿನ್ನುತ್ತದೆ. ದೊಡ್ಡ ಪಂಡಿತರಾಗಿ ವಿದ್ವಾಂಸರೆನ್ನಿಸಿ ಸಡಗರದಿಂದ ಮೆರೆಯುವವರಲ್ಲಿ ವೈರಾಗಿಗಳು ಅಪರೂಪ. ಹಾಗೆಯೇ ಐಶ್ವರ್ಯವಂತ ಧನಿಕರಲ್ಲಿ ಉದಾರ ಬುದ್ಧಿಯ ಧರ್ಮಾತ್ಮ ಅಪರೂಪ. ನೊಣಗಳ ಪೈಕಿ ಜೇನುನೊಣ ಮಾತ್ರ ಸುಗಂಧ ಪುಷ್ಪಗಳಲ್ಲಿ ಕೂತು ಜೇನನ್ನೇ ಸಂಗ್ರಹಿಸುತ್ತದೆ. ತೀವ್ರವಾದ ಸೂರ್ಯನ ಪ್ರಕಾಶವನ್ನು ಚಂದ್ರನು ಶೀತಳಮಾಡಿ ನಮಗೆ ತೋರಿಸುತ್ತಾನೆ. ಹಾಗೆಯೇ ಶಾಸ್ತ್ರಪ್ರತೀತಿ, ಗುರುಪ್ರತೀತಿ, ಆತ್ಮಪ್ರತೀತಿ ಈ ಮೂರು ತ್ರಿಧಾಪ್ರತೀತಿಯಿಂದಲೂ, ಶ್ರುತಿ, ಯುಕ್ತಿ, ಅನುಭೂತಿ ಈ ಮೂರು ತ್ರಿಸತ್ಯದಿಂದಲೂ, ವೈರಾಗ್ಯ, ಬೋಧ, ಉಪರಮ ಈ ಮೂರು ಪರಮಾರ್ಥ ಪ್ರಾಪ್ತಿಗೆ ಅತ್ಯಗತ್ಯವಿರುವ ರತ್ನತ್ರಯ ಸಹಾ ಸಂಪಾದಿಸಿ ತಮ್ಮ ಸ್ವಾನುಭವ ಪ್ರಕಟಿಸುವವರು ಬಹಳ ಅಪರೂಪವೇ ಸರಿ.

ಬ್ರಹ್ಮಪ್ರಾಪ್ತಿಗೆ ಅನಂತ ಗ್ರಂಥಗಳು ಪ್ರಕಟಿಸಲ್ಪಟ್ಟಿವೆ. ಆಕಾಶವು ವಿಶಾಲ ರೆಕ್ಕೆಗಳಿಂದ ಅತಿ ಮೇಲಕ್ಕೆ ಹಾರುವ ಗರುಡಪಕ್ಷಿಗಳಿಗೂ, ಕಿರಿದಾದ ಪಕ್ಕಗಳಿರುವ ಸಣ್ಣ ನೊಣಗಳಿಗೂ ಹಾರಲಿಕ್ಕೆ ಅವಕಾಶಕೊಡುವಂತೆ ಪರಮಾರ್ಥ ವಿಷಯ ಗಹನವಾದದ್ದು. ಅದರ ಪೈಕಿ ಪ್ರಸ್ಥಾನತ್ರಯ ಅಂದರೆ ಗೀತಾ, ಬ್ರಹ್ಮಸೂತ್ರಗಳು ಮತ್ತು ಮುಖ್ಯ ದಶ ಉಪನಿಷತ್ತುಗಳ ಮೇಲೆ ಅನೇಕ ಟೀಕಾ, ವ್ಯಾಖ್ಯಾನ, ಕಾರಿಕಾ, ಭಾಷ್ಯಗಳನ್ನು ಪ್ರಕಟಿಸುವದು ಪ್ರವಾದಿಯರೂ, ಆಚಾರ್ಯರೂ, ಪಂಡಿತರೂ, ದಿಗ್ವಿಜಯಿಗಳೂ ತಮ್ಮ ಕೀರ್ತಿಗೆ ಅತ್ಯಾವಶ್ಯಕವೆಂದು ಆ ಮಹತ್ವದ ಕೆಲಸ ಕೈಗೊಳ್ಳುತ್ತಾರೆ. ಸಿದ್ಧರು ಮಾತ್ರವಲ್ಲ, ಸಾಧಕರು ಸಹ ಅವರ ಸಾಧನೆಯ ಕ್ರಮ ಮತ್ತು ಸ್ವಾನುಭವವನ್ನು ಸಕಲರಿಗೂ ಸಹಾಯಕವಾಗಬಹುದೆಂದು ಪ್ರಕಟಿಸುವ ವಾಡಿಕೆ ಸಹಾ ಉಂಟು. ಹಾಗೆಯೇ ನಾನು ಸ್ವತಹಾ ಮಾಡಿದ ಸಾಧನೆಯ ಕ್ರಮ ಮತ್ತು ಅದರ ಫಲವಾಗಿ ನನಗೆ ಪ್ರಾಪ್ತವಾದ ಅನುಭವ, ಸಾಧಕರ ಉಪಯೋಗಕ್ಕೆ ಬಿದ್ದೀತೆಂದು ಈ ಗ್ರಂಥದಲ್ಲಿ ತಪ್ಸೀಲಾಗಿ ಬರೆದಿದ್ದೇನೆ. ಅದೇ ಪ್ರಕಾರ ಸಂಸಾರದಿಂದ ಅಲಿಪ್ತ, ಜ್ಞಾನ, ವೈರಾಗ್ಯ, ಅಲಂಕೃತ, ಬ್ರಹ್ಮಾನಂದ ಮಗ್ನ, ದ್ವಂದ್ವಾತೀತ, ಅಭಿನ್ನಜ್ಞಾನ ಪ್ರಾಪ್ತವಾಗಿರುವ, ಭಕ್ತರ ಚೈತನ್ಯದಲ್ಲಿ ಸ್ವಯಂಪ್ರಕಾಶ, ಸ್ವರೂಪಾನುಭವ ಪ್ರಬಲವಾಗುವಂತೆಯೂ, ಆ ಸಮಯದಲ್ಲಿ ಕಂಪ, ಸ್ವೇದ, ಪ್ರೇಮಾಶ್ರು, ರೋಮಾಂಚ ಇತ್ಯಾದಿ ಸಾತ್ವಿಕ ಅಷ್ಟಭಾವಗಳನ್ನು ಪ್ರಕಟಿಸುವ, ಅಹಂಕಾರ, ವಾಸನಾ, ಅಜ್ಞಾನ ನಾಶಮಾಡಿ, ವಿಜ್ಞಾನ ಸಂಚಾರ ಹೃದಯದಲ್ಲಿ ಉದ್ಭವಿಸುವ ಉದಾರ ಶಕ್ತಿದಾತಾ ಇಂಥಾ ಮಹಾತ್ಮರ ಬೋಧವನ್ನೂ, ಉಪಾಸನಾ ಮಾರ್ಗ ಸ್ಥಾಪನೆಮಾಡಿ ಈಶ್ವರ ಪ್ರಾಪ್ತಿ ಸುಲಭವಾಗುವಂತೆ ಯುಕ್ತಿ ಪ್ರದರ್ಶಿಸುವ ಜ್ಞಾನಿಗಳಿಗೆ ಆನಂದಕೊಡುವ, ಯೋಗಿಗಳಿಗೆ ಚಿತ್ತಸ್ಥೈರ್ಯ ಕೊಡುವ, ಭಾವಿಕರಿಗೆ ಹರಿಪ್ರೇಮ ಉತ್ಪನ್ನಮಾಡುವ ಸತ್ಪುರುಷರ ವಚನಗಳನ್ನೂ ಸಹಾ ಈ ಗ್ರಂಥದಲ್ಲಿ ಗ್ರಂಥಬಾಹುಳ್ಯಕ್ಕೆ ಹೆದರಿ ಅಲ್ಪ ಸ್ವಲ್ಪ ಸೂಚಿಸಿರುತ್ತೇನೆ.

ನಮಗೆ ಒಬ್ಬ ಮೇಜಿಸ್ಟ್ರೇಟರಿದ್ದರು. ಅವರು ಪ್ರತಿ ಸಂಗತಿಗೆ "Show me the authority" ಅಂದರೆ "ನೀವು ಹೇಳುವುದಕ್ಕೆ ಆಧಾರವಾಗಿ ಕಾನೂನು ಏನು ತೋರಿಸು" ಎನ್ನುವ ಖೋಡಿಯುವರಾಗಿದ್ದರು. ಒಂದು ಸರ್ತಿ ಒಬ್ಬ ಪೋಲಿಸ್ ಪ್ರೊಸಿಕ್ಯೂಟರನು ಅವರ ತಲೆಗೆ ಬೆರಳು ತೋರಿಸಿ "It is in this book of common sense" ಎಂದರೆ "ನಿನ್ನ ತಲೆ ಉಪಯೋಗಿಸಿದರೆ ನಿನಗೆ ಗೊತ್ತಾಗುತ್ತದೆ" ಅಂದರು. ಹಾಗೆಯೇ, "A mind allarguments is a knife all blades" ಎಂದರೆ "ಕುತರ್ಕದಲ್ಲಿಯೇ ರಮಿಸುವ ಮನಸ್ಸು—ಹಿಡಿ ಇಲ್ಲದೆ ತೀಕ್ಷ್ಣ ಅಲಗುಗಳು ಮಾತ್ರ ಇರುವ ಚೂರಿಯಂತೆ ನಿರುಪಯೋಗಿ". ಹಾಗೆ ನಾನು ಬರೆದ ಪ್ರತಿ ಒಂದು ವಾಕ್ಯಕ್ಕೆ ಆಧಾರವಾಗಿ, ವೇದ, ಉಪನಿಷತ್ ಶಾಸ್ತ್ರಾಧಾರಕೊಡುವಷ್ಟು ಗ್ರಂಥ ಸಂಗ್ರಹ ನನ್ನಲ್ಲಿ ಇಲ್ಲ. ಆದ್ದರಿಂದ—

"ಯುಕ್ತಿಯುಕ್ತಮುಪಾದೇಯಂ ವಚನಂ ಬಾಲಕಾದಪಿ ।
ಅನ್ಯತ್ತೃಣಮಿವತ್ಯಾಜ್ಯಂ ಅಪ್ಯುಕ್ತಂ ಪದ್ಮಜನ್ಮನಾ ॥ ೧ ॥
ಅಪಿ ಪೌರುಷಮಾದೇಯಂ ಶಾಸ್ತ್ರಂ ಚೆದ್ಯುಕ್ತಿ ಬೋಧಕಂ
ಅನ್ಯತ್ತ್ವಾರ್ಷಮಪಿತ್ಯಾಜ್ಯಂ ಭಾವ್ಯಂ ನಾ ಯ್ಯೈಕ ಸೇವಿನಾ ॥ ೨ ॥

ಅಂದರೆ ನ್ಯಾಯವಾದ ವಾಕ್ಯ ಒಬ್ಬ ಬಾಲಕನು ಹೇಳಿದರೂ ಅಂಗೀಕರಿಸಬೇಕು. ಅವಿಚಾರದ ವಚನ ಸಾಕ್ಷಾತ್ ಬ್ರಹ್ಮನೇ ಹೇಳಿದರೂ ತೃಣಸಮವೆಂದು ಬಗೆದು ಧಿಕ್ಕರಿಸಬೇಕು.

ಜ್ಞಾನಿಯಾಗಿರುವ ಭಕ್ತನು ಒಬ್ಬ ಕ್ಷುಲ್ಲಕ ಮನುಷ್ಯನ ವಚನಗಳನ್ನಾದರೂ ಅವುಗಳಿಂದ ಜ್ಞಾನೋತ್ಕರ್ಷವಾಗುತ್ತದಾದರೆ ಮತ್ತು ನ್ಯಾಯಕ್ಕನುಸಾರವಾದರೆ ಗ್ರಹಣಮಾಡುವನು. ತದ್ವಿರುದ್ಧ ವಚನಗಳನ್ನು ಸುಜ್ಞಾನಿಗಳಾದ ಮುನಿಗಳು ಹೇಳಿದರೂ ತ್ಯಜಿಸಬೇಕು. ತನ್ನ ಹಿರಿಯರು ತೋಡಿದ ಬಾವಿ ಎಂತ ಆ ಬಾವಿಯ ಮಲಿನ ನೀರು ಉಪಯೋಗಿಸಿ ಸಮೀಪದ ಪವಿತ್ರ ಗಂಗಾಜಲವನ್ನು ಧಿಕ್ಕರಿಸುವವರು ಅನ್ಯರ ಅಧಿಕಾರಕ್ಕೊಳಗಾಗಿರುವ ಗುಲಾಮರಂತಿರುವರೆಂಬ ಅರ್ಥ.

—ಯೊ. ವಾ. II 18, 2.3.4.

ಶೇಕ್ಸ್‌ಪಿಯರಿನಲ್ಲಿ ಇಯಾಗೊ ಎಂಬವನ ವಾಕ್ಯ ಏನೆಂದರೆ—
"Why not worship God, even if it is the devil that tells you?" ಎಂದರೆ "ದೇವರ ಪೂಜೆಮಾಡು ಎಂದು ಸೈತಾನನೇ ಹೇಳಿದರೂ ಯಾಕೆ ಪೂಜೆ ಮಾಡಬಾರದು?"

ತುಕಾರಾಮರು ಹೇಳುತ್ತಾರೆ:—

"ರುಸಾವೆಂ ಫುಗಾವೆಂ ಆಪುಲಿಯಾವರಿ । ಉರಲಾತೊ ಹರಿ ಸಕಳಿಕ" ॥ ಎಂದರೆ "ನಮ್ಮ ಸಿಟ್ಟು, ಗರ್ವ ಎಲ್ಲಾ ನಮ್ಮ ನಮ್ಮ ಮೇಲೆ ತೋರಿಸಬೇಕಲ್ಲದೆ ಇತರರ ಮೇಲೆ ಅಲ್ಲ. ಯಾಕೆಂದರೆ ನಮ್ಮ ಹೊರತು ಬಾಕಿ ವಿಶ್ವದಲ್ಲಿರುವವರೆಲ್ಲಾ ಶ್ರೀ ಹರಿಯೇ."

ಈ ಸದ್ಭಾವದಿಂದ ಪತ್ರ, ಪುಷ್ಪ, ಫಲ, ನೀರು ಮಾತ್ರವಾದರೂ ಅರ್ಪಿಸಿದರೆ ದೇವರು ಪ್ರಸನ್ನನಾಗಿ ಅಂಗೀಕರಿಸುವಂತೆ ಈ ಗ್ರಂಥವನ್ನು ಗುಣಗ್ರಾಹಿಗಳಿಗೋಸ್ಕರ ಪ್ರಕಟಿಸಿರುತ್ತೇನೆ. ಇದನ್ನು ಟೀಕೆಮಾಡುವ, ದೋಷ ಅರಸುವ ಸೂಕ್ಷ್ಮದರ್ಶನ ಯಂತ್ರದಿಂದ ನೋಡಿದರೆ ಎಷ್ಟು ನಯವಾದ ಅಂದವಾದ ವಸ್ತುವಾದರೂ ದೊರಗಾಗಿಯೂ, ಅಸಹ್ಯ ವಾಗಿಯೂ ಅದು ತೋರಿಸುತ್ತದೆ. ಆದರೆ ಎಷ್ಟು ಮಲಿನ ರವಿಕಿರಣ ವಾದರೂ sympathetic prism ಅಂದರೆ ಕಂಪಕ್ರಕಚಾಯತ ದಿಂದ ನೋಡಿದರೆ ಅದರಲ್ಲಿ ಮನೋಹರವಾದ ಸಪ್ತವರ್ಣಗಳು ಸುಶೋಭಿತವಾಗಿ ತೋರುತ್ತವೆ. ಹಾಗೆ ಸಹೃದಯ ಗುಣಗ್ರಾಹಿಗಳು ನನ್ನ ಯೋಗ್ಯತೆ ಪರೀಕ್ಷಿಸಲಿಕ್ಕೆ ಆತುರಪಡದೆ ಬರೆದಿರುವ ವಿಷಯವನ್ನು ಶಾಂತ, ನಿಷ್ಪಕ್ಷಪಾತಚಿತ್ತದಿಂದ ಗ್ರಹಣಮಾಡಿ ಲಾಭಪಡೆಯುವರೆಂಬ ಆಶೆಯಿಂದ ಈ ಗ್ರಂಥ ಪ್ರಕಟಿಸುವ ಪಾಠಕರ ಹಿತಚಿಂತಕ,

**ಕುಬೇರ ಆನಂದರಾವ್,**
ಗ್ರಂಥಕರ್ತ.

---

# ಅನುಕ್ರಮಣಿಕೆ

## ಪ್ರಥಮ ಪ್ರಕರಣ

### ಸಾಧನಾಕ್ರಮ ಮತ್ತು ಸ್ವಾನುಭವ



## ದ್ವಿತೀಯ ಪ್ರಕರಣ

### ಪರಾವಿದ್ಯಾ

# ತೃತೀಯ ಪ್ರಕರಣ

## ಮಾನವೀ ಧರ್ಮ



# ಚತುರ್ಥ ಪ್ರಕರಣ

## ಬ್ರಹ್ಮ ವಿಚಾರ

# ಶ್ಲೋಕಗಳ ಮತ್ತು ಅಭಂಗಗಳ ಅನುಕ್ರಮಣಿಕೆ

ಗ



ಚ



ಜ

## ತ

ದ



ಧ



ನ

## ಪ

ಹ





ಓಂ

॥ ತತ್ಸತ್ಪರಮಾತ್ಮನೆ ನಮಃ ॥

# ಪರಾ ವಿದ್ಯಾ

## ಮಂಗಲಾಚರಣ

1. ಅತಿ ಕಲ್ಯಾಣರೂಪತ್ವಾನ್ನಿತ್ಯಕಲ್ಯಾಣ ಸಂಶ್ರಯಾತ್ ।
ಸ್ಮತೃಣಾಂ ವರದತ್ವಾಚ್ಚ ಬ್ರಹ್ಮ ತನ್ಮಂಗಲಂವಿದುಃ ॥ ॥ ೧ ॥

2. ಯೆನೆದಂ ಪೂರಿತಂ ಸರ್ವ ಮಾತ್ಮನ್ಯೈ ವಾತ್ಮನಾತ್ಮನಿ ।
ನಿರಾಕಾರಂ ಕಥಂವಂದೇಹ್ಯಭಿನ್ನಂ ಶಿವಮವ್ಯಯಂ ॥ ॥ ೨ ॥

3. ಪಂಚಭೂತಾತ್ಮಕಂ ವಿಶ್ವಂಮರೀಚಿ ಜಲ ಸನ್ನಿಭಂ ।
ಕಸ್ಯಾಪ್ಯಹೋನಮಸ್ಕುರ್ಯಾಮಹಮೇಕೋನಿರಂಜನಃ ॥ ೩ ॥

4. ಓಂಕಾರಶ್ಚಾಥ ಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ।
ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ॥ ॥ ೪ ॥



# ವಾಚಕರಿಗೆ ಸೂಚನೆ

**ಈ ಪಟ್ಟಿ ಪ್ರಕಾರ ಇಡೀ ಪುಸ್ತಕದಲ್ಲಿ ಅಶುದ್ಧ ಅಕ್ಷರಗಳನ್ನು ತಿದ್ದಿ ಓದೋಣಾಗಲಿ**

## ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ii | 15 | ವೈರಾಗ್ಯ, ಅಲಂಕೃತ | ವೈರಾಗ್ಯ ಅಲಂಕೃತ |
| 6 | 25 | ಕೇಳುವರು | ಕೇಳಿದರು. |
| 10 | 23 | ಖೇಸಿ | ಖೇಪಿ |
| ,, | 24 | ಖೇಸಿ | ಖೇಪಿ |
| 14 | 6 | Superconscoius | Superconscious |
| 15 | 8 | ಪರಮಾರ್ಥಕಃ | ಪರಮಾರ್ಥತಃ |
| 15 | 16 | ಭುವೌ | ಭ್ರುವೌ |
| 21 | 25 | ಚಿತಾ | ಚಿಂತಾ |
| 32 | 20 | ಶಾಪಗ್ರಸಳಾಗಿ | ಶಾಪಗ್ರಸ್ತಳಾಗಿ |
| 38 | 11 | ತುರ್ಘುರ | ತುರ್ಘುಂ |
| 40 | 25 | ದುಧುರಂ | ಮುಧುರಂ |
| 41 | 14 | ಕಿಶಿರಮುಸಿ | ಕಿತಿರಮುಸಿ |
| ,, | 20 | ರಘುರಾಜಾಪದವಿ | ರಘುರಾಜಪದವಿ |
| 42 | 20 | ದಾನಾಸನ್ಮುಖ | ದಾಸಾಸನ್ಮುಖ |
| 46 | 9 | ಷಡ್ಪಕ್ಷಗಳು | ಷಡ್ಚಕ್ರಗಳು |
| 47 | 2 | ಪ್ರಣವದದ | ಪ್ರಣವದ |
| 69 | 17 | ಆತಹಿತ | ಆತ್ಮಹಿತ |
| 108 | 12 | ಶಬ ಪಳೆಂ ಭಕ್ಷಿ | ಶಬರಿಚಿಂ ಫಳೆಂ ಭಕ್ಷಿ |

| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| 115 | 1 | ವಿಷಾತ್ ಮೃತಾತ್ ಪ್ರೀತಿ | ವಿಷಾತ್ ಪ್ರೀತಿ |
| 120 | 16 | ಮಾಡಿಗನು | ಮಾಡಿದನು |
| 133 | 27 | ಬುದಿ | ಬುದ್ಧಿ |
| 137 | 4 | ಪಾತ | ಪಾತ್ರ |
| 138 | 11 | ಅನಾಹುತ | ಅನಾಹತ |
| 140 | 20 | ಮುಮುಕ್ಷ್ನಾವು | ಮುಮುಕ್ಷ್ಣುವು |
| 148 | 14 | ಪರಮಾತ್ಮಾತ | ಪರಮಾತ್ಮಾತ್ಮ |
| 177 | 1 | ಭಗ್ತಿ | ಭಕ್ತಿ |
| 209 | 22 | ಪ್ರತ್ಸದ್ಯಮಃ | ಪ್ರತ್ಯುದ್ಯಮಃ |
| 209 | 8 | ಧಿಯೊಯೊನಃ ಪ್ರಚೊದಯಾತ್ | ಧಿಯೊಯೊನಃ ಪ್ರಚೊದಯಾತ್ |



# ಪರಾ ವಿದ್ಯಾ

## ಪ್ರಥಮ ಪ್ರಕರಣ

### ಸಾಧನಕ್ರಮ ಮತ್ತು ಸ್ವಾನುಭವ

### ೧. ಅನುತಾಪ

ನಾನು ಶಾಲಾಮಾಸ್ತರ್, ಮೆಜಿಸ್ಟ್ರೆಟ್ ಕೋರ್ಟ್ ಕ್ಲಾರ್ಕ್, ಮುನ್ಸಿಫ್ ಕೋರ್ಟ್ ಪ್ರೊಸೆಸ್ ರಾಯ್ಟರ್, ಅಬ್ಕಾರಿ ಸಬ್ ಇನ್ಸ್‌ಪೆಕ್ಟರ್–ಇಷ್ಟು ಸರಕಾರಿ ಉದ್ಯೋಗ ಮಾಡಿ ಪ್ರತಿ ಸರ್ತಿ "Vacancy ceased" ಅಂದರೆ ನಿನ್ನ ಕೆಲಸ ಮುಗಿಯಿತು ಎಂದು ನನಗೆ ಹುಕುಮಾಗಿ, ನನ್ನ 7 ವರ್ಷದ ಸರ್ವಿಸು ದಂಡವಾಯಿತು. ಆಜ್ಮೈರ್ ಅಬ್ಕಾರಿ ಸಬ್ ಇನ್ಸ್‌ಪೆಕ್ಟರ್ ಕೆಲಸ 1903ನೆ ಇಸ್ವಿಯಲ್ಲಿ ಕಾಯಂ ಆಯಿತು. ಆದರೆ ಆ ಡಿಪಾರ್ಟಮೆಂಟಿನಲ್ಲಿ ಸತ್ಯಕ್ಕನುಸಾರ ಕೆಲಸ ಮಾಡಲಿಕ್ಕೆ ಯಾವ ಮನುಷ್ಯನಿಗಾದರೂ ಸಾಧ್ಯವಿಲ್ಲವೆಂದು ನನಗೆ ನಿಶ್ಚಯವಾಗಿ ಪೋಲಿಸ್ ಡಿಪಾರ್ಟ್‌ಮೆಂಟಿಗೆ ಸೇರಿದೆನು. ಪೋಲಿಸಿನಲ್ಲಿ ಮನಸ್ಸಾಕ್ಷಿಗೆ ಸರಿಯಾಗಿ ಕೆಲಸ ಮಾಡಲಿಕ್ಕೆ ಸಾಧ್ಯವಾಯಿತು. ಆದರೆ ನನ್ನ ಮೇಲಾಫೀಸರರ ಸೌಕರ್ಯ ("Looking to the comforts of Superiors") ನೋಡುವ ಕುಶಲತೆ ನನ್ನಲ್ಲಿಲ್ಲದೆಯೂ, ಕೈಕೆಳಗಿನ ಪೋಲೀಸ್ ಫೌಸಿನವರೊಂದಿಗೆ ಸೇರಿ ಅನಾಚಾರ ಮಾಡಲಿಕ್ಕೆ ತಕ್ಕ ಶೀಲ ನನ್ನಲ್ಲಿಲ್ಲದೆ, ಅವರ ತಪ್ಪುಗಳನ್ನು ಕಂಡುಹಿಡಿದ ಪ್ರತಿ ಸರ್ತಿ ಅವರ ಮೇಲೆ ರಿಪೋರ್ಟುಮಾಡಿ ಅವರಿಗೆ ಶಿಕ್ಷೆ ಆಗುವದರಿಂದಲೂ, ಅವರೂ ಮೇಲಾಫೀಸರರೂ ತಾಬೇದಾರರೂ ನನಗೆ ಉಲ್ಟಿಯಾಗಿ ಶತ್ರುತ್ವ ಸಾಧಿಸಿ ನನನ್ನು ಅನೇಕ ಗಂಡಾಂತರಕ್ಕೆ ಗುರಿಮಾಡಿ ಜೈಲಿಗೆ ಸಹ ಹೋಗುವ ಅನೇಕ ಸಂದರ್ಭಗಳು ನನಗೆ ಒದಗಿ ಎಷ್ಟು

*

ಸತ್ಯಕ್ಕನುಸಾರ, ಮನಸ್ಸಾಕ್ಷಿಗೆ ಸರಿಯಾಗಿ ನಾನು ನಡೆದರೂ ಭಯಂಕರ ಸಂಕಷ್ಟಗಳು ನನಗೆ ಬಂದು ಆಖೈರಿಗೆ ಚಾಡಿಖೋರ ಒಬ್ಬ ಸುಪರಿಂಟೆಂಡೆಂಟ್ ದೊರೆ ನನಗೆ ಹಾಳುಮಾಡಲಿಕ್ಕೆ ಹಟ ಹಿಡಿದದ್ದರಿಂದ ನನಗೆ ಚಿಂತೆ ಹೆಚ್ಚಾಗಿ ಆರೋಗ್ಯಸಹಾ ಕೆಟ್ಟುಹೋಯಿತು. ಕೆಲಸಕ್ಕೆ ರಾಜಿಕೊಡುವ ಕಾಲ ಬರಲು, ಕೈಯಲ್ಲಿ ಕಾಸಿಲ್ಲ, ನನ್ನ ಇದ್ದ ಹಣ ಎಲ್ಲಾ Arbuthnot Bank failure ಅಂದರೆ ಆರ್ಬತ್ನಾಟ್ ಬೇಂಕು ದಿವಾಳಿಯಾಗಿ ಹೋಯಿತು, ಜೀವನಕ್ಕೇನು ಉಪಾಯವಿಲ್ಲ ಇನ್ನು ಆತ್ಮಹತ್ಯೆ ಮಾಡುವದೆಂದು ನಿಶ್ಚಯ ಮಾಡಿದೆ. ಆಗ ನನ್ನ ಕುಲಪುರೋಹಿತರು ಆತ್ಮಹತ್ಯೆ ಮಹಾಪಾಪ ನೀನು ಶಿರಾಲೆ ಮಠಕ್ಕೆ ಹೋಗಿ ಸ್ವಾಮಿಯವರಿಂದ ಉಪದೇಶ ಪಡೆದು ಸಾಧನೆ ಮಾಡೆಂದು ಹೇಳಿದರು. ಆಗ ನನಗೆ ಉಪನಯನ ಕಾಲ ಕೊಟ್ಟ ಗಾಯತ್ರಿ ಮಂತ್ರದ ಮುಂದೆ ಇತರ ಮಂತ್ರಗಳು ಗೌಣ ಎಂದು ತಿಳಿದು, ಗಾಯತ್ರಿ ಮಂತ್ರದ ಮಹತ್ವದ ಸ್ವಾನುಭವ ನನಗೆ ನೆನಪಾಯಿತು. ಇದು ಯಾವ ಸಂದರ್ಭದಲ್ಲಿ ಅಂದರೆ, 1891ನೇ ಇಸ್ವಿಯಲ್ಲಿ ನಾನು ಮೈಲಾಪುರದ ಕೆಥೊಲಿಕ್ ಬಿಷಪ್ಪರ St. Thome Semminary ಎಂಬ ಹೈಸ್ಕೂಲಿನಲ್ಲಿ ಮೆಟ್ರಿಕ್ಯುಲೇಶನಿಗೆ ಕಲಿಯುವಾಗ ಆ ಶಾಲೆಯಲ್ಲಿ ಕನ್ನಡ ಕಲಿಸುವ ಪಂಡಿತನಿಲ್ಲದೆ ಆ ವರ್ಷದ ಮೇ ತಿಂಗಳ ರಜೆಯಲ್ಲಿ ಪ್ರೆಸಿಡೆನ್ಸಿ ಕೊಲೇಜಿನ ಕನ್ನಡ ಪಂಡಿತ ಶಿವಶಂಕರ ಶಾಸ್ತ್ರಿಗಳ ಹತ್ತಿರ ಆ ರಜೆಯು ಮುಗಿಯುವದರೊಳಗೆ ನನಗೆ ಕನ್ನಡ ಟೆಕ್ಸ್ಟ್ ಕಲಿಸಬಹುದೆ ಎಂದು ಕೇಳಿದಾಗ ನನ್ನ ಕನ್ನಡ ಜ್ಞಾನದ ವಿಷಯ ಪರೀಕ್ಷಿಸುವಾಗ ವಿಭಕ್ತಿ ಹೇಳು ಎಂದರು. ನಾನು ಪ್ರಭವ, ವಿಭವ ಎನಲು "ವಿಭಕ್ತಿ ಕೇಳಿದರೆ ಸಂವತ್ಸರ ಹೇಳುತ್ತೀಯೆ" ಎಂದು ಕೂಗಿದರು. ಮತ್ತು ಅವರ ಕೂಡೆ ಕನ್ನಡ ಮಾತಾಡುವಾಗ ಕೆಲವು ತಮಿಳು ಶಬ್ದಗಳು ಸೇರುವದು ನೋಡಿ ನನಗೆ ಕಲಿಸುವುದು ಅಸಾಧ್ಯವೆಂತ ಎಣಿಸಿ ಅವರು ಅವರ ದೇವರ ಕೋಣೆಗೆ ಹೋಗಿ ಪ್ರಾರ್ಥನೆಮಾಡಿ ಬಂದು, "ಇಗೋ, ಈ ಹಾಲು ಕುಡಿ. ನಿನಗೆ ದೇವರ ಪ್ರಸಾದ ಆಯಿತು. ನೀನು ನಾನು ಹೇಳುವಂತೆಯೇ ಮಾಡಿದರೆ ಪಾಸ್ ಮಾಡುತ್ತೀ" ಎಂದು ಹೇಳಿ ಒಂದು ಗಿಂಡಿಯಲ್ಲಿ ಹಾಲು ಕುಡಿಯ

ಲಿಕ್ಕೆ ಕೊಟ್ಟು ನನಗೆ ಉಪದೇಶಿಸಿದ್ದೇನೆಂದರೆ "ನೀನು ದಿನಾಲು ರಾತ್ರಿ ಇರುವಾಗ ಎದ್ದು ಸ್ನಾನಮಾಡಿ, ವಿಭೂತಿ ಹಚ್ಚಿ, ನಿರ್ಜನ ಪ್ರದೇಶದಲ್ಲಿ ಕುಳಿತು ಸೂರ್ಯನು ಕಣ್ಣಿಗೆ ಕಾಣುವ ವರೇಗೆ ಗಾಯತ್ರಿ ಮಂತ್ರ ಜಪಿಸಿ ಸೂರ್ಯನಿಗೆ ಅಡ್ಡ ಬಿದ್ದು ನಿನ್ನ ಕರ್ಣಾಟಕ ಬೂಕು ಓದು; ನೀನು ಪಾಸ್ ಮಾಡುತ್ತಿ" ಎಂದರು. ಇವರ ಈ ಬೋಧದಲ್ಲಿ ಪೂರ್ಣ ವಿಶ್ವಾಸ ಇಟ್ಟು ಶ್ರದ್ಧೆಯಿಂದ ಜಪಿಸಲು ನಾನು ಪಾಸಾದೆ. ಈ ಅನುಭವದ ನೆನಪು ಸಹಾ ಆಗಿ ನಾನು ಗಾಯತ್ರಿಯ ಸಾಧನೆ 1908ರಲ್ಲಿ ಶುರು ಮಾಡಿದೆ.

## ೨. ಸಾಧನೆಯ ಕ್ರಮ

ಆ ಸಾಧನೆಯ ಕ್ರಮ ಹ್ಯಾಗಂದರೆ ರಾತ್ರಿ 3 ಘಂಟೆಗೆ ಎದ್ದು 1,000 ಗಾಯತ್ರಿ ಮಂತ್ರ ಜಪಿಸುತ್ತಿದ್ದೆ. ಆದರೂ ಕಷ್ಟಗಳೂ, ಚಿಂತೆಯೂ ಹೆಚ್ಚುತ್ತಾ ಡಿಪಾರ್ಟ್‌ಮೆಂಟಿನವರ ದ್ವೇಷ ಸಾಧನೆಯಿಂದ ನನ್ನ ಆರೋಗ್ಯ ಕೆಟ್ಟು ಹೋಗಿ, ಸರ್ಜನರ ಮೂಲಕ 6 ತಿಂಗಳಾದರೂ ರಜೆ ಪಡಕೊಳ್ಳುವ ಪ್ರಯತ್ನ ಮಾಡಲಿಕ್ಕೆ ಮದ್ರಾಸಿಗೆ ಹೋಗುವಾಗ, ಕಲ್ಲಿಕೋಟೆ ಸ್ಟೇಶನ್ ಸಮೀಪಿಸುವಾಗ ರೈಲಿನಲ್ಲಿ ಕುಳಿತ ನನಗೆ ಗಾಡಿ ಹತ್ತುವ ಹಲಿಗೆಯ ಮೇಲೆ ಬಿಳೀ ರುಮಾಲು ಮತ್ತು ಕುತ್ತಿಗೆಯಿಂದ ಕಾಲಿನ ಅಡಿಗಳಿಗೆ ಮುಟ್ಟುವ ಬಿಳೀ ಅಂಗಿ ಹಾಕಿಕೊಂಡಿರುವ ಒಬ್ಬ ಆಜಾನುಬಾಹು ದಾಂಡಿಗ ಮನುಷ್ಯನು ನನ್ನ ಹೆಗಲ ಮೇಲೆ ಕೈ ಇಟ್ಟು ನನ್ನ ಹಿಂದೆ ಬಾ ಎನಲು "ನನಗೆ ಪತ್ನಿ ಉಂಟು" ಎಂದು ನಾನು ಹೇಳಿದ್ದಕ್ಕೆ "ಇನ್ನೂ ಸಂಸಾರ ನಿನಗೆ ಸವಿ ಕಾಣುತ್ತದೊ "Is the world yet sweet to you?" ಎಂತ ಹೇಳಿ ಅದೃಶ್ಯನಾದನು, ನನಗೆ ಮದ್ರಾಸಿಗೆ ತಲ್ಪಿದ ಶುರು ಹಪ್ತೆಯಲ್ಲೇ ಕಠಿಣ typhoid ಸನ್ನಿಪಾತ ಜ್ವರ ಬಂದು 27ನೇ ದಿವಸ ರಾಯಪೇಟೆಆಸ್ಪತ್ರೆಯಲ್ಲಿ ಇದ್ದಾಗ ಬೆಳಿಗ್ಗೆ 8 ಘಂಟೆಗೆ ಸರ್ಜನರು "The fellow will croak now" ಅಂದರೆ ಈತ ಈಗ ಸಾಯುತ್ತಾನೆ ಎಂದು ಅವರೊಟ್ಟಿಗಿದ್ದ ಅಸಿಸ್ಟಾಂಟ್ ಸರ್ಜನ್ ಬಂಟ್ವಾಳ ಕೇಶವ ರಾಯರ ಕೂಡೆ ಹೇಳಿದರು. ಆಗ ಅದನ್ನು

ಕೇಳಿ ನಾನು ನನ್ನ ಉಪಾಸನಾ ದೇವತೆಯಾದ, ಗಾಯತ್ರಿಯನ್ನು ಕರೆದೆ. ಕೂಡಲೇ ನನಗೆ ಕಣ್ಣುಕತ್ತಲೆ ಬಂದು ನಾನು ಬಹಳ ಹೊತ್ತು ಮೇಲೆ ಮೇಲೆ ಹೋಗುವುದಾಗಿ ನನಗೆ ತೋರಿತು. ನಂತರ ಒಂದು ಮೈದಾನ ದಲ್ಲಿ ಒಂದು ಬಂಡೆಕಲ್ಲಿನ ಮೇಲೆ ಒಬ್ಬ ಸ್ತ್ರೀಯನ್ನು ಕಂಡು ಅವಳು ಗಾಯತ್ರಿ ಎಂದು ತಿಳಿದು "ನಿನ್ನ ಖುಶಿಬಂದಂತೆ ನನ್ನ ನಂಬ್ರ ತೀರಿಸು. ಬಾಕಿ ಇಡಬೇಡ" ಅಂದೆ. ಅದಕ್ಕವಳು "ನಿನ್ನ ಆಯುಷ್ಯ ಈಗ ಮುಗಿ ಯಿತು. ಆದರೆ ನಿನಗೆ ಅಷ್ಟೇ ಆಯುಷ್ಯ ಕೊಟ್ಟಿದ್ದೇನೆ. ಅದು ಪಾರ ಮಾರ್ಥ ಸಾಧನೆಗೆ ಹಾಕಬೇಕೆಂದು ಹೇಳಿ ನನಗೆ ಕುತ್ತಿಗೆಗೆ ಕೈಹಾಕಿ ದೂಡಿದಳು, ನಾನು ಲಕ್ಷ ಫೀಟು ಎತ್ತರದಿಂದ ಕೆಳಕ್ಕೆ ಬೀಳುವಷ್ಟು ಧಕ್ಕೆ ನನ್ನ ಜೀವಕ್ಕಾಗಿ, ಧೊಪ್ಪನೆ ಹಾರಿ ಬಿದ್ದು ಕಣ್ಣುಬಿಡಲು ಕೇಶವರಾಯರು ನನ್ನ ಮುಖದ ಹತ್ತಿರ ಮುಖ ಇಟ್ಟು ನನ್ನ ಬಲ ಕೈಯನ್ನು ಹಿಡಿದು ನಿಂತವರು "ನಿನಗೆ ಜೀವ ಬಂತೊ, ಮಹಾರಾಯ! ನಿನಗೆ ಶ್ವಾಸ ಇಲ್ಲ. ನಾಡಿ ತಾಗುವದಿಲ್ಲ. ಶರೀರ ಎಲ್ಲಾ ತಣ್ಣಗಾಗುತ್ತಾ ಬಂತು ನಿನ್ನ ಆಶೆ ಬಿಟ್ಟು ನಿಂತಿದ್ದೆ" ಅಂದರು. ನಡೆದ ಸಂಗತಿ ಅವರಿಗೆ ತಿಳಿಸಿದೆ. ಅವರು ನಂಬಲಿಲ್ಲ. ಮರುಬೆಳಿಗ್ಗೆ 8 ಘಂಟೆಗೆ ಅವರು ನೋಡುವಾಗ ಜ್ವರ ಬಿಟ್ಟಿತ್ತು. ರೈಲಿನಲ್ಲಿ ನನಗೆ ಸಿಕ್ಕಿದ ಮಹಾತ್ಮ ನನ್ನ ಗುರುದೇವ ದತ್ತಾತ್ರೇಯ ಎಂತ ನನಗೆ ಗುರ್ತು ಸಿಕ್ಕಿತ್ತು. ಅದೂ ಹೇಗೆಂದರೆ 1883 ರಲ್ಲಿ ನಾರಾಯಣ ಭಟ್ಟರ ನಾಟಕದಲ್ಲಿ ಶುರು ಫರ್ದೆಯಲ್ಲಿ ಸುಮಾರು 10 ಫೀಟು ಉದ್ದ ದಾಂಡಿಗ ದತ್ತಾತ್ರೆಯನ ಭಾವಚಿತ್ರ 3 ಮುಖಗಳಿದ್ದು, 4 ನಾಯಿಗಳು ಮತ್ತು ಒಂದು ದನ ಜೊತೆಯಲ್ಲಿರುವುದನ್ನು ನಾನು ನೋಡಿದ 4 ನಾಟಕಗಳಲ್ಲಿಯೂ ಚೆನ್ನಾಗಿ ನೋಡಿ ಅದರ ನೆನಪು ನನಗೆ ಚೆನ್ನಾಗಿ ಇತ್ತು. ಅದರಿಂದ ರೈಲಿನಲ್ಲಿ ಭೆಟ್ಟಿಯಾದ ವ್ಯಕ್ತಿಯ ಗುರ್ತು ಹಿಡಿದೆ ಮಾತ್ರವಲ್ಲ ಅಂದಿನಿಂದ ದತ್ತಾತ್ರೇಯನ ನಾಮಸ್ಮರಣೆ ಮಾಡು ವದು, ಆತನ ಅವಧೂತ ಗೀತೆ ಪಾರಾಯಣ ಮಾಡುವದು, ಆತನ ತ್ರಿಕಾಲ ಭಜನೆ ಹಾಡುವದು, ಆತನ ಕುರಿತು ಇರುವ ಗುರೂಪ ನಿಷತ್ತು ಬಾಯಿಪಾಠ ಮಾಡಿ ಹೇಳುವದು. ಆತನ ಬೋಧ ಇರುವ ದತ್ತಪ್ರಬೋಧ ದತ್ತ ಭಕ್ತಿರಹಸ್ಯ ದತ್ತ ಭಜನೆ ಪುಸ್ತಕಗಳನ್ನು

ಓದುವದು ಇದೆಲ್ಲಾ ಮಾಡಲಾರಂಭಿಸಿದೆ. ದತ್ತಾತ್ರೇಯನು ಈ ಕಲಿಯುಗದಲ್ಲಿ ಅನುತಾಪ ಎಂಬ ಅಗ್ನಿ ಯಾರ ಹೃದಯದಲ್ಲಿ ಜನಿಸುವದೋ ಅವರಿಗೆ ಗುರುವಾಗಿ ಪಾರಮಾರ್ಥ ಪಥದಲ್ಲಿ ಬ್ರಹ್ಮ ಪ್ರಾಪ್ತಿ ಆಗುವವರೆಗೆ ದರ್ಶಕತ್ವ ವಹಿಸಿ ರಕ್ಷಿಸುವರಿ ನೇಮುಕವಾದ ಸಪ್ತ ಸ್ಮೃತಿಗಾಮಿನರ ಪೈಕಿ ಪ್ರಥಮನು :—

"ಶ್ರೀ ದತ್ತೋನಾರದೊ ವ್ಯಾಸಃ ಶುಕಶ್ಚಪಾವನಾತ್ಮಜಃ
ಕಾರ್ತಿಕೇಯಶ್ಚ ಗೋರಕ್ಷಃ ಸಪ್ತಯತೆ ಸ್ಮೃತಿಗಾಮಿನಃ

ಆಸ್ಪತ್ರೆಯಲ್ಲಿ 3 ತಿಂಗಳು ಇದ್ದು ಬಿಡುಗಡೆ ಆಗುವಾಗ ಸರ್ಜನರು 6 ತಿಂಗಳ ರಜೆ ಕೊಡಿಸಿದರು. ಹಾಗೆಯೇ ನಾನು ನನ್ನ ಊರಾದ ಕಾರ್ಕಳಕ್ಕೆ ಬಂದೆ. ಆಸ್ಪತ್ರೆಯಲ್ಲಿರುವಾಗಲೂ, ಕಾರ್ಕಳದಲ್ಲಿಯೂ ಸದಾಕಾಲ ಗಾಯತ್ರಿಯನ್ನೇ ಜಪಿಸುತ್ತಿದ್ದೆ. ಕಾರ್ಕಳಕ್ಕೆ ಹೋದ 3 ತಿಂಗಳಲ್ಲಿ ಎಂದಿನಂತೆ ಸಾಧನೆಗೆ ಕೂತಾಗ ಬೆಳಿಗ್ಯೆ 4 ಘಂಟೆ ಸಮಯ ದೇಹದ ಮತ್ತು ವಿಶ್ವದ ಮರವೆ ಬಿದ್ದು ಕೂಡಲೆ ಒಂದು ದೊಡ್ಡ ಬಂಡೆ ಕಲ್ಲಿನಲ್ಲಿ ಕೊರೆದು ತಯಾರಿಸಿದ ದೇವಸ್ಥಾನದಲ್ಲಿ ದತ್ತಾತ್ರೆಯನು ಒಂದು ಕಾವಿಯ ಕೌಪೀನ ಮತ್ತು ಉತ್ತರೀಯ ವಸ್ತ್ರ ಧರಿಸಿದ, ಗಡ್ಡ ಇಲ್ಲದ ರೂಪನ್ನು ಕಂಡೆ. ಅವನು ನನಗೆ ಓಂ ಎಂಬ ಮಂತ್ರ, ಖೇಚರೀ ಮುದ್ರೆ, ಪಶ್ಚಿಮೋತ್ಥಾನ ಆಸನ ವಿಧಿಸಿದ ಕೂಡಲೇ ನಾನು ಎಚ್ಚರಕ್ಕೆ ಬಂದೆ. ಮರುದಿವಸ ಸಹಾ ಬೆಳಿಗ್ಯೆ 4 ಘಂಟೆಗೆ ಧ್ಯಾನಕ್ಕೆ ಕೂತ ನನಗೆ ಅದೇ ಪ್ರಕಾರ ದೇಹದ ಮತ್ತು ವಿಶ್ವದ ಮರವೆಬಿದ್ದು ಒಂದು ದೊಡ್ಡ ಮೈದಾನಿನಲ್ಲಿ ಒಂದು ದೊಡ್ಡ ಶಿಲೆಕಲ್ಲಿನಲ್ಲಿ ಕೌಪೀನ ಇದ್ದು ಶರೀರಕ್ಕೆಲ್ಲಾ ಭಸ್ಮ ಇರುವ, ವಿಶಾಲ ಜಟೆ ಇರುವ ಕೂತಿರುವ ದಾಂಡಿಗ ಈಶ್ವರನನ್ನು ನಾನು ನೋಡಿದೆ. ಆತನ ಬಲ ತೊಡೆಯ ಮೇಲೆ ನನ್ನ ಎಡ ಕೈ ಇಟ್ಟು 5 ವರ್ಷದ ಬಾಲಕನಂತೆ ನಿಂತಿರುವ ನನ್ನನ್ನೂ ನೋಡಿದೆ. ಆತನ ಮುಂದೆ ಎರಡು ಸಾಲಾಗಿ ಕಿರೀಟಧಾರಿಗಳಾಗಿ ಅನೇಕ ದೇವರುಗಳು ನಿಂತಿದ್ದರು. ಅವರ ಹಿಂದೆ ಸಾವಿರಾರು ಋಷಿಗಳೂ, ತಪಸ್ವಿಗಳೂ, ಸಾಧಕರೂ, ಭಕ್ತರೂ ನಿಂತಿದ್ದರು. ಪ್ರಥಮ ಸಾಲಿನ ದೇವರ ಪೈಕಿ

ಒಬ್ಬನು ಒಂದು ಕಿರೀಟವನ್ನು ಈಶ್ವರನ ಕಾಲಿನ ಹತ್ತಿರ ಇಟ್ಟನು. ಈಶ್ವರನು ತಲೆ ಬಾಗಿಸಲು ಅನೇಕ ದೇವರ ಹಸ್ತಗಳೆಲ್ಲಾ ಒಟ್ಟಾಗಿ ಅದನ್ನು ತಲೆಗಿಟ್ಟರು. ಆತನು ತಲೆ ನೆಟ್ಟಗೆ ಮಾಡಿ ನನಗೆ ತಲೆ ಬಗ್ಗಿಸ ಲಿಕ್ಕೆ ಹೇಳಿದಾಗ, ನಾನು ಬಗ್ಗಿಸಿದಾಗ, ಅವರೆಲ್ಲಾ ನನಗೂ ಅದೇ ಪ್ರಕಾರ ಆ ಕಿರೀಟ ತಲೆಗಿಟ್ಟರು. ನಾನು ತಲೆ ಎತ್ತಿದ ಕೂಡಲೇ ಎಚ್ಚರಕ್ಕೆ ಬಂದೆ. ಅದರ 3 ದಿವಸಗಳ ವರೆಗೆ ನನ್ನ ದೇಹಮಾಡುವ ಎಲ್ಲಾ ಕಾರ್ಯಗಳು ನಾನು ಮಾಡುವದೂ ಅಲ್ಲಿ ನಾನು ದೇಹದಿಂದ ಮಾಡಿಸು ವದೂ ಅಲ್ಲ, ನನ್ನ ಎಳ್ಳಿನಷ್ಟಾದರೂ ಯಾವ ಸಂಕಲ್ಪವೂ ಇಲ್ಲದೆ ದೇಹಮಾಡುವದನ್ನೆಲ್ಲಾ ನಾನು ಸಾಕ್ಷಿರೂಪದಿಂದ ನೋಡುತ್ತಿದ್ದೆ. ಅದರ ನಂತರ ಸಾವಿರಾರು ಸರ್ತಿ ದತ್ತಾತ್ರೇಯನು ನನಗೆ ದರ್ಶನ ಕೊಡುತ್ತಾನೆ. ಮತ್ತು ದೇಹದ ಮರವೆ ಬಿದ್ದು ಸವಿಕಲ್ಪ ನಿರ್ವಿಕಲ್ಪ ಸಮಾಧಿ ಸ್ಥಿತಿ ಯಲ್ಲಿ ಕೆಲವು ಸರ್ತಿ 9 ಘಂಟೆಗಳ ವರೆಗೂ ಇರುತ್ತಿದ್ದೆ. ಈಗ ಸಹಾ ಆತ್ಮಸಾಕ್ಷಾತ್ಕಾರದ ಕುರಿತು ಪ್ರವಚನ ಮಾಡುವಾಗ ಹಾಗೆಯೇ ದೇಹದ ವಿಸ್ಮೃತಿ ಬೀಳುತ್ತದೆ. ಗಾಯತ್ರಿಯ ಅಭ್ಯಾಸ ಮಾಡಿದ 6 ತಿಂಗಳಲ್ಲಿಯೇ ಪ್ರಥಮ ನನಗೆ ಪ್ರೇಮಾಶ್ರು ಶುರುವಾಗಿ ನಂತರ ಕ್ರಮ ವಾಗಿ ದಿನ ಹೋಗುತ್ತಾ ಎಲ್ಲಾ ಸಾತ್ವಿಕ ಅಷ್ಟಭಾವಗಳು ಶುರುವಾಗಿ ಸವಿಕಲ್ಪ ಸಮಾಧಿ ಶುರುವಾಯಿತು. ಇದಕ್ಕೆಲ್ಲಾ ಮೂಲ ಅನುತಾಪ, ಅನುತಾಪದಿಂದ ವೈರಾಗ್ಯ, ವೈರಾಗ್ಯದಿಂದ ತ್ಯಾಗ, ಇದೆಲ್ಲಾ ಸರಸೆಯಾಗಿ ಸಾಧಕನಿಗೆ ಉತ್ಪನ್ನವಾಗುತ್ತವೆ.

## ೩. ಅನುತಾಪದ ದೃಷ್ಟಾಂತಗಳು

1. ಪ್ರೊಫೆಸರ್ ಸಿಯಾರಾಮನೆಂಬುವನು F.A. ಕಲಿಯುವಾಗ ಕೊಲೇಜಿನಲ್ಲಿ ಪಾಠದ ಸಮಯ ಕ್ಲಾಸಿನಲ್ಲಿ ಕೂತವನು ಬೊಬ್ಬೆ ಹಾಕಿ ಅಳಲಾರಂಭಿಸಿದನು. ಪ್ರೊಫೆಸ್ಸರರು ಕ್ಲಾಸಿನ ಹೊರಗೆ ಓಡಿಸಲು ಕೊಲೇಜಿನ ಹಿಂದೆ ಕೂತು ಹೆಚ್ಚು ಹೊತ್ತು ಕೂಗಿ ಶಾಂತನಾದ ನಂತರ ಕಾರಣ ಕೇಳುವರು. ಕೇಳಿದಾಗ ತನಗೆ ಇಷ್ಟು ಪ್ರಾಯ (18 ವರ್ಷ) ಆದರೂ ಯಾಕೆ ನನಗೆ ಈ ಜನ್ಮ, ನನಗೂ ವಿಶ್ವಕ್ಕೂ ಏನು ಸಂಬಂಧ

ಈ ವಿಚಾರ ಏನೂ ಮಾಡಲಿಲ್ಲಾ! ಮರಣ ಯಾವಾಗಲಾದರೂ ಬರ ಬಹುದು. ಇಷ್ಟು ಕಾಲ ಹಾಳುಮಾಡಿದ್ದೆನಲ್ಲಾ ಎಂತ ಪಶ್ಚಾತ್ತಾಪ ಶುರು ಆಗಿ ಕೂಗಿದೆ ಎಂದನು. ಆದರ ನಂತರ ವೈರಾಗ್ಯ ಪ್ರಾಪ್ತಿಯಾಗಿ ದೊಡ್ಡ ಯೋಗಿ ಆದನು.

2. **ರಮಣ ಮಹರ್ಷಿ.** 17 ವರ್ಷ ಪ್ರಾಯದಲ್ಲಿ 5ನೇ ಕ್ಲಾಸಿ ನಲ್ಲಿ ಕಲಿಯುವಾಗ ತಾನು ಒಂದು ದಿವಸ ಸಾಯಬೇಕಲ್ಲಾ ಎಂದು ತೋರಿ ನೆಟ್ಟಗೆ ನೆಲದ ಮೇಲೆ ಮಲಗಿ ಕೈಕಾಲು ನೆಟ್ಟಗೆ ಮಾಡಿ ಕೆಲವು ಹೊತ್ತಿನ ನಂತರ ಎದ್ದು, ಮರಣದ ಅನುಭವ ಬಂದರೂ ನಾನು ಸಾಯ ಲಿಲ್ಲ. ಹೀಗೆ ಎಷ್ಟೊ ಸರ್ತಿ ದೇಹ ಧರಿಸಿದ ನಾನು ದೇಹಕ್ಕೆ ವಿರಹಿತ ನಾದವನು ಯಾರು ಎಂತ ವಿಚಾರಕ್ಕೆ ಕೂತುಕೊಳ್ಳಲಿಕ್ಕೆ ಶುರುಮಾಡಿ ದನು. ಆತನ ಸ್ವರೂಪವು ಮನಬುದ್ಧಿ ಅಗೋಚರವಾದುದರಿಂದ ವಿಚಾರ ಎಲ್ಲಾ ಸ್ತಬ್ಧವಾಗಿ ಆತನು ಸಮಾಧಿಯಲ್ಲಿ ಹೋಗಲಿಕ್ಕೆ ಶುರುಮಾಡಿದನು.

ಶರೀರದ ಜ್ವರಕ್ಕೆ ತಾಪ ಎಂತ ನಾವು ಹೇಳುತ್ತೇವೆ. ಮನಸ್ಸಿನ ಜ್ವರಕ್ಕೆ ಅನುತಾಪ ಎನ್ನುತ್ತಾರೆ.

3. ಭಾನುದಾಸನಿಗೆ 12 ವರ್ಷ ಪ್ರಾಯದಲ್ಲಿ ಚಿಕ್ಕತಾಯಿಯು ದಡ್ಡ, ಜೊಡ್ಡ, ಹೆಡ್ಡ ಎಂದು ಧಿಕ್ಕರಿಸಲು ಅನುತಾಪ ಬಂದು ಸೂರ್ಯನಾರಾಯಣ ದೇವರ ಮೂರ್ತಿಯ ಹಿಂದೆ ಅನುತಾಪದಿಂದ ಅನ್ನ ನೀರು ಬಿಟ್ಟು ಮಲಗಿರಲು, ಸೂರ್ಯನು ಪ್ರತ್ಯಕ್ಷನಾಗಿ ಏನುಬೇಕೆಂದು ಕೇಳಲು, ಜ್ಞಾನ ಕೊಡು ಎಂದು ಭಾನುದಾಸನು ಬೇಡಿದಾಗ ದೇವರು ಜ್ಞಾನ ದಾನ ಮಾಡಿದನು. ಆತನು ಆ ಲಾಗ್ಯಾತು ವೈರಾಗಿ ಮತ್ತು ಜ್ಞಾನೀ ಭಕ್ತನಾದನು.

4. ರತ್ನಾಕರನು ಹಾದಿಯಲ್ಲಿ ಹೋಗುವವರಿಗೆ ತಲೆ ಒಡೆದು ಖೂನಿಮಾಡಿ ಧನ ಅಪಹಾರ ಮಾಡುತ್ತಿದ್ದನು. ನಾರದನು ಆತಗೆ ಕೇಳಿದ "ನೀನು ಅನೇಕ ಖೂನಿ, ದರೋಡೆ ಮಾಡಿದ ಪಾಪದ ಪಾಲು ನಿನ್ನ ಹಣದ ಮೇಲೆ ಆಧರಿಸಿರುವ ನಿನ್ನ ಸಮ್ಮಂಧಿಕರು ತೆಗೆದುಕೊಳ್ಳಲಿಕ್ಕೆ ತಯಾರಿದ್ದಾರೊ ಕೇಳಿ ಬಾ" ಎನಲು, ಆತನು ಕೇಳಿದ್ದಕ್ಕೆ ಅವನನ್ನು ಅವಲಂಬಿಸಿರುವವರೆಲ್ಲಾ "ನೀನು ಹ್ಯಾಗೆ ಹಣ ತರುತ್ತೀ ನಮಗೇನು

ಗೊತ್ತು? ನಾವು ನಿನ್ನ ಕರ್ಮಕ್ಕೆ ಭಾಗೀದಾರರಲ್ಲ ಎಂದು ಹೇಳಿದ ಕೂಡಲೆ ಅವನಿಗೆ ಅನುತಾಪ ಶುರುವಾಗಿ ನಾರದನ ಚರಣಕ್ಕೆ ಬಿದ್ದು, ಆತನ ಅನುಗ್ರಹಕ್ಕೆ ಪಾತ್ರನಾಗಿ ವಾಲ್ಮೀಕಿ ಋಷಿಯಾದನು.

5. ಜಗಾಯಿ ಮಧಾಯಿ ಇವರಿಗೆ ಶ್ರೀ ಗೌರಂಗ ಮಹಾಪ್ರಭು "ನೀವು ಅನಂತ ಪಾಪಗಳನ್ನು ಮಾಡಿದವರು. ಅದರ ಹೊರೆ ಹೊರಲು ನಿಮಗೆ ಸಾಮರ್ಥ್ಯ ಉಂಟೊ?" ಎಂದು ಕೇಳಲು, ಕೂಡಲೆ ಅವರಿಗೆ ಅನುತಾಪ ಶುರುವಾಗಿ ಆತನ ಕಾಲಿಗೆ ಬಿದ್ದು ಅನುಗ್ರಹಿತರಾದರು.

6. ವಿಶ್ವಾಮಿತ್ರನು ತನ್ನ ಗೈರಹಾಜರಿಯಲ್ಲಿ ತನ್ನ ಕುರಿತು "ಈ ಪೌರ್ಣಿಮಿ ಚಂದ್ರನಂತೆ ನಿಷ್ಕಲಂಕ ಮನುಷ್ಯನು ಯಾರಾದರೂ ಇದ್ದಾನೊ ಎಂತ ಅರುಂಧತಿ ಕೇಳಲು ವಸಿಷ್ಠರು "ಹೌದು ಒಬ್ಬ ಇದ್ದಾನೆ. ಅವನು ವಿಶ್ವಾಮಿತ್ರನು" ಎಂದು ಹೇಳಿದ್ದು ಕೇಳಿದ ಕೂಡಲೆ ವಿಶ್ವಾಮಿತ್ರನಿಗೆ ತಾನು ಅದರ ಮುಂಚೆ ವಸಿಷ್ಠನ ಮೇಲೆ ದ್ವೇಷ ಸಾಧಿಸಿ ಮಾಡಿದ ಅನೇಕ ದುಷ್ಟ ಕೃತ್ಯಗಳ ನೆನಪಾಗಿ ಕೂಡಲೆ ಅನುತಾಪ ಬಂದು ವಸಿಷ್ಠನಿಗೆ ಶರಣು ಹೋಗಿ ಬ್ರಹ್ಮಋಷಿ ಆದನು.

## ೪. ವೈರಾಗ್ಯ

ಅನುತಾಪದಿಂದ ವೈರಾಗ್ಯ ಪ್ರಾಪ್ತಿಯಾಗುತ್ತದೆ. ಶ್ರೀ ಶಂಕರಾಚಾರ್ಯರು ಹೇಳುತ್ತಾರೆ:—

6. 1) ನವೈರಾಗ್ಯಾತ್ ಪರಂಭಾಗ್ಯಂ ॥ ನಬೋಧಾತ್ಪರಃ ಸಖಾ।
ನಸಂಸಾರಾತ್ಪರಃ ಶತ್ರುರ್ನತ್ರಾತಾ ಗುರುತರಃ ಪರಂ ॥

7. 2) ಬ್ರಹ್ಮಾದಿ ಸ್ಥಾವರಾಂತೇಶು ವೈರಾಗ್ಯಂ ವಿಷಯೆಷ್ವನು
ಯಥೈವ ಕಾಕವಿಷ್ಟಾಯಾಂ ವೈರಾಗ್ಯಂತದ್ಧಿ ನಿರ್ಮಲಂ.

8. 3) ಭೋಗೇ ರೋಗಭಯಂ, ಕುಲೇಚ್ಯುತಿಭಯಂ ವಿತ್ತೇ
ನೃಪಾಲಾದ್ಭಯಂ ॥ ಮಾನ್ಯೇದೈನ್ಯಭಯಂ, ಬಲೇರಿಪು
ಭಯಂ, ರೂಪೇ ಜರಾಯಾಭಯಂ, ಶಾಸ್ತ್ರೇವಾದ
ಭಯಂ, ಗುಣೆ ಖಲಭಯಂ, ಕಾಯೇ ಕೃತಾಂತಾ
ದ್ಭಯಂ ॥ ಸರ್ವಂವಸ್ತು ಭಯಾನ್ವಿತಂ ಭುವಿನೃಣಾಂ,
ವೈರಾಗ್ಯಮೇವಾಭಯಂ ॥

— ಭರ್ತೃಹರಿಯ ವೈರಾಗ್ಯ ಶತಕ,

ವೈರಾಗ್ಯ ಸಾತ್ವಿಕ, ರಾಜಸಿಕ, ತಾಮಸಿಕ ಎಂತ ತ್ರಿವಿಧ. ತಾಮಸ ವೈರಾಗ್ಯಕ್ಕೆ ಸ್ಮಶಾನ ವೈರಾಗ್ಯ ಎಂತಲೂ ಹೇಳುತ್ತಾರೆ. ಅದು ಸಂಸಾರದಲ್ಲಿ ದುಃಖ, ಕಷ್ಟಗಳೂ ಹೆಚ್ಚಾಗಿ, ಸಹಿಸಲಿಕ್ಕಾಗದೆ ಚಿಂತಾಕ್ರಾಂತ ಮನುಷ್ಯನು ವೈರಾಗಿಯಾಗುತ್ತಾನೆ. ಆದರೆ ಇದು ಬಹು ಸ್ವಲ್ಪ ಕಾಲ ಇದ್ದು ವಿಷಯಗಳ ಪ್ರಾಪ್ತಿಯಾದಲ್ಲಿ ನಿವೃತ್ತಿಯಾಗುತ್ತದೆ. ಸಂಸಾರದಲ್ಲಿ ಸುಖದಲ್ಲಿರುವ ಮನುಷ್ಯನಿಗೆ ಕಷ್ಟ ಯಾ ದುಃಖ ವಿಶೇಷ ಇಲ್ಲದೆ ಇರುವಾಗ ಬರುವ ವೈರಾಗ್ಯ ರಾಜಸಿಕ. ಇದು ಸಹಾ ಹೆಚ್ಚು ಕಾಲ ಇದ್ದರೂ ನಾಶವಾಗುತ್ತದೆ. ಬುದ್ಧನ ಹಾಗೆ ಅರಸು ಮಗನಾಗಿ ಸಂಸಾರದಲ್ಲಿರುವುದಕ್ಕೆ ಅನಂತ ಪ್ರಲೋಭನಗಳಿದ್ದರೂ ಸಟ್ಟನೆ ಸಂಸಾರ ತ್ಯಾಗ ಮಾಡಿ ಹೋಗಲಿಕ್ಕೆ ಪ್ರೇರಿಸುವ ವೈರಾಗ್ಯ ಸಾತ್ವಿಕ. ಅದು ನಾಶವಾಗುವುದಿಲ್ಲ. ಪೂರ್ಣ ವೈರಾಗ್ಯ ಬಂದ ಮನುಷ್ಯನು ತನ್ನ ಸರ್ವಸ್ವವನ್ನೂ ದೇವರಿಗೆ ಅರ್ಪಣೆಮಾಡಿ ಆತ್ಮನಿವೇದನದಿಂದ, “ಸ್ವಾಮಿ, ನಿನ್ನ ಇಚ್ಛೆಯಂತಾಗಲಿ” ಎಂದು ಶರಣು ಹೋಗುವನು.

ಬ್ರಹ್ಮಲೋಕ ತೃಣೀಕಾರೊ ವೈರಾಗ್ಯಸ್ಯಾವಧಿರ್ಮತಾ ॥

### ೫. ವೈರಾಗ್ಯಕ್ಕೆ ದೃಷ್ಟಾಂತಗಳು :—

1. ಕೋಟ್ಯಾಧೀಶನಾದ ಪಟ್ಟನತ್ತು ಪಿಳ್ಳೈ ಎಂಬ ಸಾಹುಕಾರನು ಒಂದು ದಿವಸ “ಮರಣಾನಂತರ ನಮ್ಮೊಟ್ಟಿಗೆ ಒಂದು ತುಂಡಾದ ಸೂಜಿ ಸಹಾ ಬರುವದಿಲ್ಲ” ಎಂದು ಆತನ ಮಗನು ಬರೆದು ತನ್ನ ಮೇಜಿನ ಮೇಲಿಟ್ಟ ಚೀಟನ್ನು ಓದಿ ನೋಡಿ ವಿರಾಗಿಯಾದನು. ಅದರ ಮುಂಚೆ ಆತನು ಅತ್ಯಂತ ಲೋಭಿಯಾಗಿದ್ದ.

2. ಒಬ್ಬ ಸುಲ್ತಾನನ ಮಗನು ರಾತ್ರೆ ಊಟಮಾಡುವಾಗ ಆತನ ದಾಸಿಯು ಆತನ ಶಯನದ ಮಂಚದ ಮೇಲೆ ಹಾಸಿ ಅದರ ಮೇಲೆ ಜಾಜೀ ಹೂ, ಪರಿಮಳ ದ್ರವ್ಯ ಚಿಮ್ಮಿ ತಯಾರಿಸುವಾಗ ಇದರ ಸುಖ ಹೇಗೆಂತ 5 ಮಿನಿಟು ನೋಡುವ ಎಂಬ ಇಚ್ಛೆ ತೀವ್ರವಾಗಲು ಅವಳು ಆ ಹಾಸಿಗೆಯ ಮೇಲೆ ಮಲಗಿದಳು. ಮಲಗಿದ ಕೂಡಲೇ ಆವಳಿಗೆ ಗಾಢ ನಿದ್ರೆ ಬಿತ್ತು. ಯಜಮಾನನು ಊಟ ತೀರಿಸಿ ಶಯನಕ್ಕೆ ಬಂದಾಗ

ನಿದ್ರೆಯಲ್ಲಿದ್ದ ದಾಸಿಯನ್ನು ನೋಡಿ ಸಿಟ್ಟಾಗಿ ಕುದುರೆಗೆ ಹೊಡೆಯುವ ಚಾಟಿಯಿಂದ ಚೆನ್ನಾಗಿ ಹೊಡೆಯಲು ಅವಳು ಎಚ್ಚೆತ್ತು ಗಾಬರಿಯಾಗಿ ಪೆಟ್ಟಿನ ವೇದನೆಯಿಂದ ಅಳುವ ಬದಲಿಗೆ ಚೆನ್ನಾಗಿ ನಗಾಡಿದಳು. ಯಾಕೆ ನಗಾಡುತ್ತಿ ಎಂದು ಕೇಳಲು, ಅವಳು "5 ಮಿನಿಟಿನ ಸುಖಕ್ಕೆ ಹೋಗಿ ನನಗೆ ಇಷ್ಟು ಪೆಟ್ಟು ಬಿತ್ತು. ನೀನು ರಾತ್ರೆ ಹಗಲು ಈ ಸುಖದಲ್ಲಿರುತ್ತಿ. ನಿನಗೆ ದೇವರು ಏನು ಶಿಕ್ಷೆ ತಯಾರಿಸಿದ್ದಾರೋ ಗೊತ್ತಿಲ್ಲವೆಂತ ಭಾವಿಸಿ ನಗಾಡಿದೆನು" ಎಂತ ಹೇಳಿದಳು. ಕೂಡಲೇ ಆ ಸುಲ್ತಾನನ ಮಗನು ಅದೇ ರಾತ್ರೆ ಅಯೂಬ್ ಪಿರ್ ಎಂಬ ಗುರುವಿಗೆ ಶರಣು ಹೋಗಿ ವೈರಾಗಿಯಾದನು.

3. ಬೆದಾರ್ ರಾಜಾ ಶಾಂತ ಬ್ರಾಹ್ಮಣಿ ಬಾದಶಹಾ ತನ್ನ ಮಾಳಿಗೆಯಿಂದ ಕೆಳಗೆ ಬಿಸಾಡಿದ ಬಾಳೆಹಣ್ಣಿನ ಸಿಪ್ಪೆಗಳನ್ನು ಒಬ್ಬ ಭಿಕ್ಷುಕನು ಹೆಕ್ಕಿ ತಿನ್ನುವುದನ್ನು ನೋಡಿ ನೌಕರನಿಂದ ಆತನಿಗೆ ಗುದ್ದು ಹೊಡಿಸಿದನು. ಆತನು ನೋವಿನಿಂದ ಕೂಗುವ ಬದಲಿಗೆ ನಗಾಡಿದುದನ್ನು ನೋಡಿ ರಾಜನು ಕಾರಣ ಕೇಳಲು "ಎರಡು ಬಾಳೆ ಸಿಪ್ಪೆ ತಿಂದುದಕ್ಕೆ ನನಗೆ ಗುದ್ದು ಬಿತ್ತು. ನೀನು ರಾತ್ರಿಹಗಲು ಅನಂತ ಸುಖಭೋಗಗಳಲ್ಲೇ ಇರುತ್ತಿ. ನಿನಗೆ ಏನು ಶಿಕ್ಷೆಯೋ" ಎಂತ ಯೋಚಿಸಿ ನಗಾಡಿದೆನೆನಲು ಆತನು ವೈರಾಗ್ಯ ತಾಳಿ ಭಕ್ತನಾಗಿ ವಿಠೋಬನ ಆಜ್ಞೆಯಿಂದ ಕಲ್ಯಾಣದ ಸಹಜಾನಂದ ಸ್ವಾಮಿಯ ಶಿಷ್ಯನಾದನು.

4. ಒಬ್ಬ ಕಲ್ಕತ್ತೆಯ ಮಿಲ್ಲಿನ ಯಜಮಾನನು ಸಾಯಂಕಾಲ ದೋಣಿಯ ಮೇಲೆ ಹೊಳೆ ದಾಟಲಿಕ್ಕೆ ಬರುವಾಗ ದೋಣಿಗಾರನು "ಗಂಡಾಂತರದ ನದಿ ಆದುರಿಂದ ಕತ್ತಲೆ ಆಗುವ ಮೊದಲೇ ಬಿಡಬೇಕು" ಎಂದನು. ದೋಣಿಯಲ್ಲಿ ಆತನು ಕೂತುಕೊಳ್ಳುವಾಗ "ಇದು ಆಖೈರ ಖೇಪಿ" ಎಂದು ದೋಣಿಯವನು ಹೇಳಿದನು. ಆ ಮಾತುಗಳು ಕಿವಿಗೆ ಬಿದ್ದ ಕೂಡಲೇ "ಇದು ಆಖೈರ ಖೇಪಿ" ಎಂಬದಕ್ಕೆ ಅರ್ಥ ತನಗೆ ಇದು ಆಖೈರ ಜನ್ಮ ಎಂತ ಮಾಡಿ ಆ ಸಾಹುಕಾರನು ತಾನು ಈ ಜನ್ಮದಲ್ಲಿಯೇ ಪ್ರಾಪ್ತಿ ಪಡೆಯಬೇಕೆಂದು ನಿಶ್ಚಯ ಮಾಡಿ ಕೂಡಲೇ ರೈಲು ಹತ್ತಿ ವೃಂದಾವನಕ್ಕೆ ಹೋದವನು ಪುನಃ ಮನೆಗೆ ಬರಲೇ ಇಲ್ಲ.

5. ಒಬ್ಬ ದವಸಧಾನ್ಯದ ವ್ಯಾಪಾರ ಮಾಡುವ ಧನಿಕ ಸಾಹುಕಾರನು ಕಳಸಿಗೆಯಿಂದ ಧಾನ್ಯ ಅಳತೆಮಾಡಿಕೊಡುವಾಗ, ಏಕ್, ದೊ, ತೀನ್ ಎನ್ನುತ್ತ ಹಾಗೆಯೇ 13ನೇ ಕಳಸಿಗೆಗೆ **ತೇರಾ** ಎಂದು ಹೇಳಿ ನಂತರ ಎಲ್ಲಾ ಧಾನ್ಯವನ್ನೂ **ತೇರಾ ತೇರಾ** ಎಂತಲೇ ಹೇಳುತ್ತಾ ತೇರಾ ಅಂದರೆ ನಿನ್ನದು ಎಂಬರ್ಥ ಮಾಡಿ ಎಲ್ಲಾ ಧಾನ್ಯ ನಿನ್ನದೇ ದೇವರೇ, ನನ್ನ ದೇಸಿಲ್ಲ ಎಂದು ಹೇಳಿ; ಧಾನ್ಯ ಮಾತ್ರವಲ್ಲ ಸಕಲ ಸೊತ್ತುಗಳನ್ನೂ ಅಂಗಳಕೆ ಹಾಕಿ, ಬರೇ ಕೌಪೀನದಲ್ಲಿ ಊರುಬಿಟ್ಟು ಹೋದನು.

6. ನೆಲ್ಲಿಕಾರದ ಒಬ್ಬ ಜೈನನು ಅವನ ಗೈರುಹಾಜರಿಯಲ್ಲಿ ಆತನ ಪತ್ನಿ ಮತ್ತು 7 ದಿವಸದ ಶಿಶು ಮಡಿದು ಹೋಗಲು ಅವರನ್ನು ಸುಡುವಲ್ಲಿ ಹೋಗಿ ನೋಡಿ ಕೂಡಲೇ ವೈರಾಗ್ಯದ ವೇಗದಿಂದ ನಿರ್ವಾಣಿಯಾದನು. ಆತನನ್ನು 1910ರಲ್ಲಿ ನಾನು ನೋಡಿದ್ದೆ.

7. ಒಬ್ಬ ಮಿಲಿಟರಿಯ ಸುಬೇದಾರನು ಒಂದು ದೌಡು ಮಾಡಿದ ಪಟ್ಟಣ ಸೂರೆಮಾಡಿ ಧಾರಾಳ ಸಾಮಾನು ತನ್ನ ಒಂಟೆಯ ಮೇಲೆ ಹಾಕುವಾಗ ಅದರ ಭಾರ ಅದರ ಶಕ್ತಿಗೆ ಮೀರಿ ಅಧಿಕವಾದ್ದರಿಂದ ಅದು ಬಿದ್ದು ಪ್ರಾಣಬಿಡುವುದನ್ನು ನೋಡಿ ಅವನು ವೈರಾಗ್ಯ ತಾಳಿ ಕಾಡಿಗೆ ಹೋದವನು ವಾಪಾಸು ಮನೆಗೆ ಬರಲೇ ಇಲ್ಲ.

## ೬. ತ್ಯಾಗದ ದೃಷ್ಟಾಂತಗಳು

ಖರೆಯಾದ ವೈರಾಗ್ಯದಿಂದ ತ್ಯಾಗಬುದ್ಧಿ ಉತ್ಪನ್ನವಾಗುತ್ತದೆ. ಅದಕ್ಕೆ ದೃಷ್ಟಾಂತಗಳು :—

1. ಹರಿಶ್ಚಂದ್ರನು ಸ್ವಪ್ನದಲ್ಲಿ ವಿಶ್ವಾಮಿತ್ರರಿಗೆ ರಾಜ್ಯ ದಾನಮಾಡಿದರೂ ತನ್ನ ಮಾತಿನ ಪ್ರಕಾರ ರಾಜ್ಯ ಕೊಟ್ಟೇಬಿಟ್ಟನು.

2. ಕರ್ಣನು ಅವನ ಪ್ರತಿಜ್ಞೆಗನುಸಾರ ತನ್ನ ಕವಚ ಮತ್ತು ಕರ್ಣಕುಂಡಲಗಳನ್ನು ಕೃಷ್ಣನಿಗೆ–ತಾನು ಅವುಗಳನ್ನು ಕೊಟ್ಟರೆ ಸಾಯುತ್ತೇನೆಂತ ಗೊತ್ತಿದ್ದರೂ–ದಾನ ಮಾಡಿಕೊಟ್ಟನು.

3. ಪ್ರಹ್ಲಾದನು ಹರಿನಾಮ ಸ್ಮರಣೆಯಲ್ಲೇ ಇದ್ದು ಪ್ರತಿ ಒಂದು ನಾಮರೂಪದಲ್ಲಿ ವಿಷ್ಣುವನ್ನೇ ನೋಡುವೆನೆಂದು ಪ್ರತಿಜ್ಞೆ ಮಾಡಿದವನು ಉರಿಯುವ ಬೆಂಕಿಯಲ್ಲಿ ಪ್ರವೇಶವಾದನು.

4. ಭರತನು ಭ್ರಾತೃಪ್ರೇಮಕೋಸ್ಕರ ತನ್ನ ತಾಯಿಯ ಆಜ್ಞೆ ಸಹಾ ಮೀರಿ ಅಯೋಧ್ಯೆಯ ರಾಜ್ಯಾಧಿಕಾರ ಬಿಟ್ಟನು.

5. ಧರ್ಮರಾಯನು ಬರೇ ನಾಯಿಯ ಮೇಲಿನ ಕನಿಕರದಿಂದ, ಪ್ರಾಪ್ತವಾದ ಸ್ವರ್ಗವನ್ನು ಸಹ ಬಿಟ್ಟನು.

6. ಶಿಬಿ ಚಕ್ರವರ್ತಿಯು ಪಾರಿವಾಳದ ರಕ್ಷಣೆ ಬಗ್ಗೆ ತನ್ನ ಸ್ವಹಸ್ತದಿಂದ ತನ್ನ ಮಾಂಸವನ್ನು ಕಡಿದು ಹಾಕಿದನು.

7. ರಾಜಾರಂತಿದೇವನು ಭಿಕ್ಷುಕರಿಗೋಸ್ಕರ ತನ್ನ ಆಹಾರ ಬಿಟ್ಟು ಕೊಟ್ಟು ತಾನು ಉಪವಾಸಿಯಾಗಿ ಮೃತನಾದನು.

8. ರಾಕಾಕುಂಬಾರನು ಬೆಕ್ಕಿನ ಮರಿಗಳ ರಕ್ಷಣೆಗೋಸ್ಕರ ಸಂಸಾರ ಬಿಟ್ಟನು.

9. ಗಾಂಧಾರಿಯು ತನ್ನ ಗಂಡನಿಗೆ ಕಣ್ಣುಗಳಿಂದ ನೋಡುವ ಸುಖ ಯಾವುದು ಇಲ್ಲವೋ ಅದು ತನಗೂ ಬೇಡ ಎಂತ ವೈರಾಗ್ಯದಿಂದ ಆ ಸುಖವನ್ನು ತ್ಯಾಗಮಾಡಿ ಕಣ್ಣುಗಳಿಗೆ ವಸ್ತ್ರ ಕಟ್ಟಿ ಸಾಯುವವರೆಗೆ ಕುರುಡಳಂತೆಯೇ ಇದ್ದಳು.

10. ದಧೀಚಿ ಋಷಿಯು ತನ್ನ ಬೆನ್ನೆಲುಬನ್ನು ದೇವರ ಉಪಯೋಗಕ್ಕಾಗಿ ಇಂದ್ರನ ವಜ್ರಾಯುಧ ಮಾಡಲಿಕ್ಕೆ ಕೊಟ್ಟನು.

11. ಪರಶುರಾಮನು ತನ್ನ ತಂದೆಯ ಆಜ್ಞೆ ಮೀರದೆ ತನ್ನ ತಾಯಿ ರೇಣುಕೆಯ ತಲೆಯನ್ನು ತನ್ನ ಪರಶುವಿನಿಂದ ಕಡಿದನು.

12. ಭೀಷ್ಮನು ತನ್ನ ತಂದೆಗೋಸ್ಕರ ಸ್ತ್ರೀ ಸುಖ ಮತ್ತು ಧನ ಬಿಟ್ಟು ಭೀಷ್ಮ ಪ್ರತಿಜ್ಞೆ ಮಾಡಿದನು.

13. ಯಯಾತಿಯ ಮಗನು ತನ್ನ ತಂದೆಗೆ ತನ್ನ ಯೌವನಾವಸ್ಥೆ ಕೊಟ್ಟು ತಾನು ಆತನ ಮುಪ್ಪನ್ನು ಧರಿಸಿದನು.

ತ್ಯಾಗವು ರಾಜಯೋಗದ ಮೂರನೆಯ ಅಂಗ ಅದರ ಅರ್ಥ ಅಸತ್ಯ ಬಿಡುವುದು, ಎಂದರೆ ಮಾಯೆಯ ಭ್ರಾಂತಿ ತ್ಯಾಗಮಾಡುವದೆಂದು ಅರ್ಥ. ಪತ್ನಿ, ಪುತ್ರ, ಹೆತ್ತವರು, ಮತ್ತು ಧನ ಸಂಪತ್ತಿನಲ್ಲಿ ಅನಾಸಕ್ತನಾಗಿರುವದೇ ತ್ಯಾಗ. ವಿಷಯಗಳನ್ನೆಲ್ಲಾ ಮರೆತು ದ್ವಂದ್ವಾತೀತನಾಗುವದೇ ತ್ಯಾಗ. ಭ್ರಾಂತಿಯ ನಾಶಮಾತ್ರವಲ್ಲ, ಸಕಲ ವಿಷಯಗಳನ್ನೂ,

ಎಲ್ಲಾ ಸುಖದ ಸಂಕಲ್ಪಗಳನ್ನೂ, ಸುಖದ ಪ್ರಾಪ್ತಿ ದುಃಖ ನಿವೃತ್ತಿ ಇವುಗಳ ಬಗ್ಗೆ ಸಕಲ ಪ್ರಯತ್ನಗಳನ್ನೂ ತ್ಯಾಗಮಾಡಿ, ತನ್ನ ಹೊರಗಿರುವ ಸಕಲ ವಸ್ತುಗಳನ್ನೂ ಪೂರ್ಣ ಮರೆಯುವುದೇ ಮಹಾತ್ಯಾಗ.

## ೨. ಸ್ವಾನುಭವ

ಸಿಂಹಾವಲೋಕನ. ನನಗೆ ದೇವರೆಲ್ಲಾ ಕಿರೀಟ ತಲೆಗಿಟ್ಟು ಈಶ್ವರನು ನನಗೆ ಪರಮಾರ್ಥದಲ್ಲಿ (initiate) ಮುಹೂರ್ತ ಮಾಡಿದ ನಂತರ ದೇಹದ ಮರವೆ ಬಿದ್ದು ನನ್ನ ಕೈಗಳು ತಮ್ಮಷ್ಟಕ್ಕೆ ಮೇಲೆ ಮೆಲ್ಲಗೆ ಹೋಗಿ ಎಡಬಲತರ್ಜನಿ ಬೆರಳುಗಳಿಂದ ಒಂದು ಭಾವಚಿತ್ರವನ್ನು ನನ್ನ ಸಹಸ್ರಾರ ಚಕ್ರದ ಮೇಲೆ ಬರೆದವು. ಅದರ ನಮೂನೆ ಈ ಕೆಳಗೆ ಪ್ರದರ್ಶಿಸುತ್ತೇನೆ. ಇದಕ್ಕೆ mystic writing ಯಾನೆ ಗುಪ್ತಲಿಪಿ ಎನ್ನಬಹುದು.

ಈ ಮೇಲಿನ ಲಿಪಿ 4, 5 ಸೆಕಂಡಿನೊಳಗೆ ನಾನು ಈಗ ಎರಡು ಪೆನ್ಸಿಲುಗಳನ್ನು ಎರಡು ಕೈಯಲ್ಲಿ ಹಿಡಿದು ಬರೆದದ್ದು. ನಾನು ನನ್ನ ದೇಹದಲ್ಲಿ ಈಗ ಸಂಚರಿಸುವ ಆತ್ಮ ಶಕ್ತಿಯಿಂದ ಬರೆದದ್ದು. ಇದನ್ನು ನನ್ನ ಕಾಲಿನ ಎರಡು ಹೆಬ್ಬೆಟ್ಟುಗಳಿಂದ ಸಹಾ ಬರೆಯಲಿಕ್ಕಾಗುತ್ತದೆ. ಸಾಧನಾ ಕಾಲದಲ್ಲಿ ಹೆಚ್ಚಾಗಿ ಬೆಳಿಗ್ಗೆ 4 ಗಂಟೆಯ ಸಮಯ ನನ್ನ ಸಾಧನೆಯಲ್ಲಿ ಏನಾದರೂ ತಬ್ಬೀಲಿ ಆಗಬೇಕಾದರೆ ಈ ಲಿಪಿ ನನ್ನ ಕೈಗಳು ನನ್ನ ನೆತ್ತಿಯ ಮೇಲಿನ ಸಹಸ್ರಾರ ಚಕ್ರದಲ್ಲಿ ಬರೆಯುತ್ತವೆ. ಅದರ ಅರ್ಥ ನನ್ನ ಪ್ರಾಣ ಮತ್ತು ಇಂದ್ರಿಯಗಳು ಗ್ರಹಣಮಾಡಿ ಅದರಲ್ಲಿ ಪ್ರದರ್ಶಿಸಿದ ಅನುಜ್ಞೆಗನುಸಾರವಾಗಿ ಅನೇಕ ತರದ ಯೋಗಸಾಧನೆಗೆ ಅಗತ್ಯವಿರುವ ವ್ಯಾಯಾಮಗಳನ್ನು ಮಾಡುತ್ತವೆ. ಆಸನ ಪ್ರಾಣಾಯಾಮ, ಧ್ಯಾನ, ಧಾರಣ ಸಮಾಧಿಗೆ ಅಗತ್ಯವಿರುವ ಬದಲಾವಣೆ ಏನಾದರೂ ಇದ್ದರೆ ಅದನ್ನು ಸಹಾ ಈ ಲಿಪಿ ಸೂಚಿಸುತ್ತದೆ. ನಮ್ಮ ತಲೆಯಲ್ಲಿ ಏನಾದರೂ ಆಲೋಚನೆ ಬಂದರೆ ಬಹು ಸೂಕ್ಷ್ಮವಾದ ನಮ್ಮ ಮೆದುಳಿನಲ್ಲಿರುವ ಅಣುಗಳು ಖರ್ಚಾಗುತ್ತವೆ. ಆಗ ಮೆದುಳಿನ ಮೇಲೆ ಆಗುವ ಗೆರೆಗಳ ಆಕಾರವೇ ಈ ಲಿಪಿ. ಆದುದರಿಂದ ನಾನು ಸಾಧನಾಕಾಲ ನನ್ನ ನಿಯಮಿತ ಸ್ಥಳದಲ್ಲಿ ಕೂತ ಕೂಡಲೆ ಈ ಲಿಪಿಗನು

ಸಾರವಾಗಿ ಹೇಳುದಲ್ಲಿ ಸಾಧನೆ ಶುರುವಾಗಿ ಅದು ಅಂತ್ಯವಾಗುವಾಗ ಒಂದು ಮುದ್ರೆ ಆಗುತ್ತದೆ. ಆಗ ಸಾಧನೆ ಮುಗಿಯುತ್ತದೆ. ಹಾಗಾಗಿ ನಾನು ಸ್ವಂತ ಬುದ್ಧಿಯಿಂದ ಬುದ್ಧಿಪೂರ್ವಕ (Conscious mind) ಏನೂ ಅದರಲ್ಲಿ ನನ್ನ ಪ್ರವೇಶವೇ ಇಲ್ಲ. ಈ ಕಾರ್ಯಗಳೆಲ್ಲಾ ಅಂದರೆ ಪರಮಾರ್ಥ ಸಾಧನೆಯ ಎಲ್ಲಾ ಚಲನವಲನ ನನ್ನಲ್ಲಿ ಕೆಲಸಮಾಡುವ (Superconscoius mind) ಅಂದರೆ ದಿವ್ಯ ಬೋಧೆಯಿಂದ ಆಗುತ್ತದೆ. ಇದರಲ್ಲಿ ನನ್ನ ಸಂಕಲ್ಪವಿಕಲ್ಪಗಳೇನೂ ಇಲ್ಲ.

ನಮ್ಮ ಮನಸ್ಸಿಗೆ 3 ಸ್ಥಾಯಿ ಯಾನೆ ಸ್ವರೂಪಗಳುಂಟು:–

1. Subconscious ಯಾನೆ ಪ್ರಕೃತಿ. ನಾವು ಆಹಾರ ನುಂಗುವ ಸಾಮಾರ್ಥ್ಯ ಮಾತ್ರ ನಮಗೆ ಉಂಟು. ಅದರ ನಂತರ ದೇಹದೊಳಗೆ ಅದು ಜೀರ್ಣವಾಗಿ ಅದರಿಂದ ಅನೇಕ ರಸ, ಧಾತುಗಳು, ಕಫ, ಪಿತ್ಥ, ರಕ್ತ ಮಾಂಸ, ನರ, ಮಜ್ಜಾ ಇತ್ಯಾದಿಗಳನ್ನು ಸೃಜಿಸುವ ಕೆಲಸ ಮಾಡುವ ಅನೇಕ (glands) ರಸಗ್ರಂಥಿಗಳು, (cells) ಜೀವ ಬೀಜಗಳು ಕೆಲಸಮಾಡಿ (Secretions) ಅನೇಕ ಪ್ರಸ್ರವಣಗಳನ್ನು ಮಾಡುತ್ತವೆ. ದೇಹಕ್ಕೆ ಅನಾವಶ್ಯಕವಾಗಿರುವ ಮಲ, ಮೂತ್ರ, ಸ್ವೇದ, ಇತ್ಯಾದಿ (Excretions) ಹೊರಗೆ ಹಾಕುವ ಅನೇಕ ಕೆಲಸಗಳು ನಡೆಯುತ್ತವೆ. ಇವುಗಳಲ್ಲಿ ನಾವು ನಮ್ಮ (Conscious mind) ಬುದ್ಧಿಪೂರ್ವಕ ಏನೂ ಮಾಡಲಿಕ್ಕಾಗುವುದಿಲ್ಲ.

2. Conscious ಯಾನೆ ಅರಿವಿನಿಂದ ಸಂಕಲ್ಪ ವಿಕಲ್ಪಗಳನ್ನು ಮನಸ್ಸಿನಿಂದಲೂ, ಚಿಂತನೆಯನ್ನು ಚಿತ್ತದಿಂದಲೂ, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳಿಂದ ಅನೇಕ ಕೃತ್ಯಗಳನ್ನು ನಾವು ನಮ್ಮ ಬುದ್ಧಿವಿಚಾರ ಮತ್ತು ನಮ್ಮ ಅಹಂಕಾರದಿಂದ ಮಾಡುತ್ತೇವೆ. ಇದೆಲ್ಲ ಜಾಗೃತಾವಸ್ಥೆಯಲ್ಲಿ.

3. Superconscious ಅಂದರೆ ಮನ ಬುದ್ಧಿಗಳಿಗೆ ಅಗೋಚರವಾದ ಅಂದರೆ Conscious mind ಅವುಗಳ ಶಕ್ತಿಗೆ ಮೀರಿ

ರುವ ನಮ್ಮ ಮನಸ್ಸಿನ ಉಚ್ಚ ಸ್ವರೂಪ (phase). ಇದಕ್ಕೆ ನಾವು ದೇವರು ಎಂತ ಹೇಳುತ್ತೇವೆ.

ಹೀಗೆ ನಮ್ಮ ಮನಸ್ಸಿನ ಮೂರು ಸ್ವರೂಪಗಳು— ಪ್ರಕೃತಿ, ಜೀವ ಮತ್ತು ದೇವರು. ಈ ಮೂರಕ್ಕೂ ಆತ್ಮ ಎಂದೂ ಹೆಸರಿದ್ದು ಬಾಹ್ಯಾತ್ಮ, ಅಂತರಾತ್ಮ, ಪರಮಾತ್ಮ ಎಂದು ಎನ್ನಿಸಿರುವ ನಮ್ಮ ಮನಸ್ಸೇ ಸರ್ವ ವ್ಯಾಪಿ.

9 ಮನೋವೈ ಗಗನಾಕಾರಂ, ಮನೋವೈ ಸರ್ವತೊಮುಖಂ ।
ಮನೋತೀತಂ ಮನಃ ಸರ್ವಂ, ನಮನಃ ಪರಮಾರ್ಥಕಃ ॥

ಅಂದರೆ ನಮ್ಮ ಮನಸ್ಸು ಗಗನಾಕಾರವಾಗಿ ಎಲ್ಲಾ ಕಡೆಯಲ್ಲಿದೆ. ಮನೋತೀತ ಸಹ ಅದೇ ಮನಸ್ಸು, ಇಂಥಾ ಮನಸ್ಸು ಸತ್ಯಕ್ಕೂ ಇಲ್ಲವೇ ಇಲ್ಲ.

ಆತ್ಮೋಪನಿಷತ್ತಿನಲ್ಲಿ ಮನಸ್ಸಿನ 3 ರೂಪಗಳನ್ನು ವ್ಯಕ್ತಪಡಿಸಿದೆ.

10 ಅಥೈವಾಂಗಿರಾಸ್ತ್ರಿವಿಧಃ ಪುರುಷಸ್ತದ್ಯಥಾ – ಬಾಹ್ಯಾತ್ಮ, ಅಂತರಾತ್ಮ ಪರಮಾತ್ಮಾಚೇತಿ ॥

11 ತ್ವಕ್ಚರ್ಮನಖಮಾಂಸ ರೋಮಾಂಗುಲ್ಯ ಪೃಷ್ಟಿವಂಶ ನಖ ಗುಲ್ಫೋದರ ನಾಭಿಮೆಂಢ್ರಕಟ್ಯೂರು ಕಪಾಲ ಭ್ರುವೌ ಲಲಾಟ ಬಾಹು ಪಾರ್ಶ್ವಶಿರೋಧಮನಿಕಾಕ್ಷೀಣಿ ಶ್ರೋತ್ರಾಣಿ ಭವಂತಿ ಜಾಯತೆ ಮ್ರಿಯತ ಇತ್ಯೆಷ ಬಾಹ್ಯಾತ್ಮನಾಮ ॥ ೧ ॥

12 ಅಥಾಂತರಾತ್ಮ ನಾಮ ॥ ಪೃಥಿವ್ಯಪ್ತೇಜೋ ವಾಯ್ವಾಕಾಶೇಚ್ಛಾದ್ವೇಷ ಸುಖದುಃಖ ಕಾಮಮೋಹ ವಿಕಲ್ಪನಾದಿಭಿಃ ಸ್ಮೃತಿ ಲಿಂಗಂ ಉದಾತ್ತಾನುದ್ದಾತ್ತ ಹೃಸ್ವದೀರ್ಘ ಪ್ಲುತ, ಸ್ಖಲಿತ ಗರ್ಜಿತ ಸ್ಫುಟಿತ ನೃತ್ಯಗೀತವಾದಿತ್ರ ಪ್ರಲಯ ವಿಜೃಂಭಿತಾದಿಭಿಃ ಶ್ರೋತಾ, ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ ಪುರಾಣೊ ನ್ಯಾಯೋ ಮೀಮಾಂಸಾ ಧರ್ಮ ಶಾಸ್ತ್ರಾಣೇತಿ ಶ್ರವಣ ಘ್ರಾಣಾ ಕರ್ಷಣ ಕರ್ಮವಿಶೇಷಣಂ ಕರೊತ್ಯೇಷಾಂತರಾತ್ಮಾನಾಮ ॥ ೨ ॥

13 ಅಥಪರಮಾತ್ಮಾ ನಾಮ । ಯಥಾಕ್ಷರಯುಪಾಸನೀಯಃ ಸಚಪ್ರಾಣಾಯಾಮಃ ಪ್ರತ್ಯಾಹಾರಃ ಸಮಾಧಿ ಯೋಗಾನುಮಾನಾಧ್ಯಾತ್ಮ ಚಿಂತಕಂ ವಟ ಕಣಿಕಾ ಶ್ಯಾಮಾಕ ತಂಡುಲಂ ವಾಲಾಗ್ರ ಶತ ಸಹಸ್ರ ವಿಕಲ್ಪನಾದಿಭಿರ್ನಲಭ್ಯತೇ ನೋಪ ಲಕ್ಷತೆ । ನಜಾಯತೇ ಮ್ರಿಯತೇ ನ ಶುಷ್ಯತೇ ನದಹ್ಯತಿ ನ ಕಂಪತೇ ನ ಭಿದ್ಯತೇ ನ ಛಿದ್ಯತೇ ನಿರ್ಗುಣಃ ಸಾಕ್ಷೀಭೂತಃ ಶುದ್ಧೋ ನಿರವಯುವಾತ್ಮಾ ಕೇವಲಃ ಸೂಕ್ಷ್ಮೋ ನಿಷ್ಕಲೋ ನಿರಂಜನೋ ನಿರಭಿಮಾನಃ ಶಬ್ದ ಸ್ಪರ್ಶರೂಪರಸಗಂಧ ವರ್ಜಿತೋ ನಿರ್ವಿಕಲ್ಪೋ ನಿರಾಕಾಂಕ್ಷಃ ಸರ್ವವ್ಯಾಪೀಸೋ ಅಚಿಂತ್ಯ ಅವರ್ಣಶ್ಚ ಪುನಾತ್ಯ ಶುದ್ಧಾನ್ಯಪೂತಾನಿ ನಿಷ್ಕ್ರಿಯಃ ಸಂಸ್ಕಾರೋನಾಸ್ತಿ ಸಂಸ್ಕಾರೋನಾಸ್ತ್ಯೇಷ ಪರಮಾತ್ಮಾ ಪುರುಷೋ ನಾಮ ॥ ೩ ॥— ಇತ್ಯಥರ್ವೇದ ಆತ್ಮೋಪ ನಿಷತ್ಸಮಾಪ್ತಃ ॥

## ೪. ತನ್ಮಯಾವಸ್ಥೆ (Trances)

1. ಒಂದು ದಿನ ಎಂದಿನಂತೆ ರಾಮುಸಮುದ್ರ ಕಾಡಿಗೆ ಹೋಗುವ ಬದಲಿಗೆ ವೆಂಕಟರಮಣ ದೇವಸ್ಥಾನಕ್ಕೆ ಅರುಣೋದಯ ಸಮಯ ಹೋದೆ. ಗರ್ಭಗುಡಿಯ ಎದುರಿನ ಸಡೆಯಲ್ಲಿ 4 ಕಂಬಗಳಿಗೆ ಒರಗಿ 4 ಜನ ಮೊಕ್ತೇಸರರು ನಿಂತಿದ್ದರು. ಗರ್ಭಗೃಹದ ಬಾಗಿಲಿನ ಹತ್ತಿರ ಪೂಜಾರಿ ದೇವರ ಸ್ತೋತ್ರ ಹೇಳುತ್ತಿದ್ದನು. ದೇವರ ಕೋಣೆಯಲ್ಲಿ ಅನೇಕ ದೀಪಗಳಿದ್ದು, ಧಾರಾಳ ಹೂ ಮಾಲೆಗಳಿಂದ ಅಲಂಕರಿಸಿದ್ದ ದೇವರ ಮೂರ್ತಿಯ ಮೇಲೆ ಅನೇಕ ಸಾವಿರ ಯಾ ಲಕ್ಷ ರೂಪಾಯಿ ಮೌಲ್ಯದ ನಗಗಳಿದ್ದು ಎಲ್ಲಾ ಶೃಂಗಾರವಾಗಿದ್ದರೂ ಪಟ್ಟೆಯ ಒಂದು ವಸ್ತ್ರ ಬಾಗಿಲಿಗೆ ಅಡ್ಡ ಬಿಟ್ಟಿತ್ತು. ವಾದ್ಯ, ನಗಾರಿ, ಕಹಳೆ, ಕೊಂಬು, ಅನೇಕ ದೊಡ್ಡ ದೊಡ್ಡ ಘಂಟೆಗಳು ಮೊಳಗುತ್ತಿದ್ದುವು. ಭಾಗವತನು ಭಜನೆ ಮಾಡುತ್ತಿದ್ದನು. ಭಕ್ತರನೇಕರು ಭಜನೆ ಹಾಡುಗಳನ್ನು ಹಾಡುತ್ತಿದ್ದರು. ಅನೇಕರು ತಾಳ, ಕರತಾಳ, ಝೂಂಜ್ರಾ ಬಡಿಯುತ್ತಿದ್ದರು. ದೇವರ ಮುಂದೆ ಬಾಗಿಲಿಗೆ ಬಿಟ್ಟಿದ್ದ ಫರದೆ ತೆರೆದ ಕೂಡಲೇ ಗರ್ಭಗೃಹದಿಂದ ದೇವರ ಮುಂದಿನಿಂದ ಒಂದು ದೊಡ್ಡ ಪ್ರಕಾಶದ ಪ್ರವಾಹ ಜಲಪ್ರಳಯದಂತೆ ಸೂರ್ಯನ ಪ್ರಕಾಶ ಸಹಾ ಅಡಗಿಸಿ ನನ್ನ ಮೇಲೆ

ಬಿದ್ದು ನಾನು ಅದರಲ್ಲಿ ಮುಳುಗಿ ಆ ಮೊಕ್ತೇಸರರ ಮಧ್ಯ ನಿಂತ ನನಗೆ ಯಾವ ಶಬ್ದವೂ ಕೇಳದೆ ಯಾವ ರೂಪವು ಕಣ್ಣಿಗೆ ಕಾಣದೆ ಶುಷುಪ್ತಿಯು ಲ್ಲಿದ್ದ ಹಾಗೆ ದೇಹದ ಮತ್ತು ವಿಶ್ವದ ಪೂರ್ಣ ಮರವೆ ಬಿದ್ದು ಸುಮಾರು ಒಂದು ಘಂಟೆ ವರೇಗೆ ನಿಂತಲ್ಲೇ ಮರಗಟ್ಟಿ ಹೋದೆ. ನಂತರ ಕಣ್ಣಿಗೆ ಜ್ವಾಲೆಯು ಉರಿ ನೋಟ ತಾಗಿ ಕಣ್ಣು ಬಿಟ್ಟೆ. ಪೂಜಾರಿಯು ಕೂರ್ಮಾ ರತಿಯನ್ನು ನನ್ನ ಮುಖದ ಹತ್ತಿರ ಹಿಡಿದಿದ್ದರು. ಅದರ ದೊಡ್ಡ ಜ್ವಾಲೆ ಸಹಾ ನನಗೆ ಬೆಳ್ಳಗೆ ತೋರಿತು. ಆದರೆ ಆರತಿ ಗ್ರಹಣಮಾಡಲಿಕ್ಕೆ ನನಗೆ ಕೈ ಅಲ್ಲಾಡಿಸಲಿಕ್ಕೆ ಆಗದೆ, ಸ್ವಲ್ಪ ಹೊತ್ತು ಮೈ ಅಲ್ಲಾಡಿಸಲಿ ಕ್ಕಾಗದೆ, ಬೆರಗಾಗಿರಲು ನನ್ನ ಸುತ್ತುಮುತ್ತು ನಿಂತವರು, ನನ್ನ ಕಣ್ಣುಗಳು ಕೆಂಪು ಉರಿಕೆಂಡದಂತೆ ಇದ್ದವೆಂತಲೂ, ಕಣ್ಣೀರು ಧಾರಾಳ ಸುರಿಯು ತ್ತಿತ್ತೆಂತಲೂ, ನನ್ನ ಹತ್ತಿರ ನಿಂತಿದ್ದ ಮೊಕ್ತೇಸರರು ನನಗೆ ಹೇಳಿದರು. ನಾನು ದೇವಾಲಯದ ಹೊರಗೆ ಹೋಗಲಿಕ್ಕೆ ತಿರುಗಿದಾಗ ಜನರೆಲ್ಲಾ ನನಗೆ ದಾರಿ ಬಿಟ್ಟುಕೊಟ್ಟರು. ಆ ದಿನದಂದಿನಿಂದ ನನಗೆ ಹುಚ್ಚು ತಾಗಿದೆ ಎಂತ ಪುಕಾರೆ ಬಿದ್ದು ನನ್ನನ್ನು ಬಲಾತ್ಕಾರದಿಂದ ಹಿಡಿದು ತಣ್ಣೀರು ಧಾರೆ ತಲೆಗೆ ಹಿಡಿಯಬೇಕೆಂದು ಕೆಲವರು, ನನ್ನ ಗ್ರಹಗತಿ ದೋಷದಿಂದ ಹುಚ್ಚು ಮಾತ್ರವಲ್ಲ (ಫಿಟ್ಸ್) ಭೂತೋನ್ಮಾದ ಶುರುವಾಗಿದೆ ಎಂತ ಹೋಮ ಮಾಡಲಿಕ್ಕೆ ನಮ್ಮ ಪುರೋಹಿತ ಭಟ್ಟರೂ ನಿಶ್ಚಯಿಸಿದರು. ಅಂತೂ ಈ ಪುಕಾರೆಯಿಂದ ನನ್ನ ಸಾಧನೆಗೆ ಅಗತ್ಯವಿರುವ ರಜೆ ನನಗೆ ಸಿಕ್ಕಿತು.

ಈ ಕುರಿತು ಒಂದು ದಂತಕಥೆ ಹೇಳುತ್ತೇನೆ. ಒಬ್ಬ ಧೊರೆಗೆ ರೈಲಿನ ಒಂದು ಇಡೀ ಕಂಪಾರ್ಟ್‌ಮೆಂಟು ತನಗೆ ಸಿಕ್ಕಬೇಕೆಂದು ಆಶೆ ಯಿಂದ ಗಾರ್ಡಿನ ಹತ್ತಿರ ಸಹಾಯ ಬೆಸಗೊಳ್ಳಲು ಆತನು ಅದಕ್ಕೆ ಒಪ್ಪಿ ಅಲ್ಲಿ ಹತ್ತಲಿಕ್ಕೆ ಬಂದ ಪೆಸೆಂಜರರಿಗೆಲ್ಲಾ ಕಿವಿಯಲ್ಲಿ ಏನೊ ಹೇಳಿದುದರಿಂದ ಅವರೆಲ್ಲಾ ಬೇರೆ ಕಂಪಾರ್ಟ್‌ಮೆಂಟಿಗೆ ಹೋದರು. ರೈಲಿನಿಂದ ಇಳಿದು ಹೋಗುವಾಗ ಗಾರ್ಡಿನ ಹತ್ತಿರ ಧೊರೆಯು "ನೀನು ಏನು ಯುಕ್ತಿ ಮಾಡಿದಿ?" ಎಂದು ಕೇಳಲು ಆತನು "ನಿಮಗೆ ಹುಚ್ಚು ಎಂತ ಅವರಿ ಗೆಲ್ಲಾ ಹೇಳಿದೆ" ಎಂದನು.

ಅದರ ನಂತರ ಕೆಲವು ಕಾಲ ನನ್ನ ದೇಹವು ನನ್ನ ಅಧೀನ ಇಲ್ಲದೆ ಜಜ್ಜರ ಕೈಯಲ್ಲಿರುವ ಪೆನ್ನಿನಂತೆ ಯಾ ಶ್ರೀ ಕೃಷ್ಣನ ಕೈಯಲ್ಲಿದ್ದ

ಕೊಳಲಿನಂತೆ-ಪೆನ್ನಿನಿಂದ ಬರೆದ ತೀರ್ಪಿನ ಜಾಣತನವಾಗಲೀ, ಕೊಳಲಿನ ರಾಗದ ಕೌಶಲ್ಯವಾಗಲಿ ಆಯಾ ಉಪಕರಣದ್ದಲ್ಲ ಹೇಗೊ ಹಾಗೆಯೇ— ನನ್ನ ಶರೀರದಿಂದಾದ ಕರ್ಮಗಳೆಲ್ಲಾ ಇಡೀ ವಿಶ್ವವನ್ನು ಪಾಲಿಸುವ ಪ್ರಕೃತಿಯ ಅಧೀನವಾಗಿತ್ತು. ಮನಸ್ಸು ತೀರಾ ನಿಸ್ಸಂಕಲ್ಪವಾಗಿತ್ತು.

ನಂತರ ಅನೇಕ ಸಾರಿ (trance) ತನ್ಮಯಾವಸ್ಥೆ ನನಗೆ ಶುರುವಾಗಿ ಕೆಲವು ಸಾರಿ 9 ಘಂಟೆ ವರೆಗೆ ಆ ಅವಸ್ಥೆಯಲ್ಲಿಯೇ ಇರುತ್ತಿದ್ದೆ. ವಿಶ್ವದಲ್ಲಿ ನಾನು ಕಿವಿಯಿಂದ ಕೇಳುವ ಯಾ ಕಣ್ಣಿನಿಂದ ನೋಡುವ ದೃಶ್ಯದಲ್ಲಿ ಇದು ದೇವರು ಮಾಡುವುದೆಂತ ತಿಳಿದುಕೊಳ್ಳುವ ಯುಕ್ತಿ ನನಗೆ ತಿಳಿದು ಅನೇಕ ಸಾರಿ ಆತನ ಮಹತ್ವ ಮನಸ್ಸಿಗೆ ನಾಟಿ ನನಗೆ ತನ್ಮಯಾವಸ್ಥೆ (trances) ಬರುತ್ತಿತ್ತು. ಆ ಪೈಕಿ ಇನ್ನೂ ಕೆಲವು ಹೇಳುತ್ತೇನೆ:—

2. ಒಂದು ದಿನ ಸರಿ ಮಧ್ಯಾಹ್ನ ಹೊತ್ತಿಗೆ ಸುಬ್ಬಯ್ಯ ಶೆಟ್ಟರ ಟ್ರೆನ್ಸಿಟಿನಲ್ಲಿ ಡ್ರಾಯ್ವರನೊಟ್ಟಿಗೆ ಕುಳಿತು ಬಂಡಿ ಹೋಗುವಾಗ ಕೂಳೂರಿನಿಂದ ಬಂಡಿ ಹೊರಟ ಕೂಡಲೇ ಆಕಾಶದಲ್ಲಿ ಬಹಳ ಮೇಲಕ್ಕೆ ಚಕ್ರಾಕಾರ ತಿರುಗುವ ಒಂದು ಹದ್ದು ನೋಡಿದೆ. ಅಷ್ಟು ಮೇಲಕ್ಕೆ ತಿರುಗುವ ಪ್ರಾಣಿಗೆ ಪೃಥ್ವಿಯಲ್ಲಿ ಬಿದ್ದಿರುವ ಸಣ್ಣ ಮಾಂಸದ ತುಂಡು ಕಾಣುತ್ತದೆ. ಅಂಥಾ ದೀರ್ಘದೃಷ್ಟಿ ಮನುಷ್ಯನಿಗೆ ಇಲ್ಲ. ಬೆಕ್ಕು, ಇಲಿ, ನರಿ ಸರ್ಪಗಳಿಗೆ ಕತ್ತಲೆಯಲ್ಲಿ ಸರಿಯಾಗಿ ಕಾಣುತ್ತದೆ. ಸಣ್ಣ ಹುಳಗಳಿಗೆ ಕಣ್ಣಿಗೆ ಅನೇಕ ರತ್ನತಾಬಲೆಗಳಂತೆ ತಾಬಲೆಗಳಿದ್ದು ದಶದಿಕ್ಕುಗಳಿಗೂ ಏಕಕಾಲಿಕ ತೋರುತ್ತದೆ. ಇಂಥಾ ದೃಷ್ಟಿ ಮನುಷ್ಯನಿಗೆ ಇಲ್ಲ. ಹಾಗೆಯೇ— "ಆದಿಶಕ್ತಿನೆ ಸಬಕೊ ಸಮಾನ ಶಕ್ತಿಪ್ರದಾನಕೀಹೈ—ಗಿದ್ದಕೀದೃಷ್ಟಿ, ಪಿಸೀಲಿಕಾಕಿ ಘ್ರಾಣಶಕ್ತಿ, ಹಂಸಕಿ ರಸನಾ, ಶ್ವಾನಕಾ ಶ್ರವಣ, ಅಂಧೊಂಕಿ ಸ್ಪರ್ಶಶಕ್ತಿ, ಮಕಡಿಕಾ ಕಾಲಜ್ಞಾನ." ಅಂದರೆ ಗರುಡನಿಗೆ ದೂರದೃಷ್ಟಿ ಅತೀ ಮೇಲಕ್ಕೆ ಹಾರುವಾಗ ನೆಲದ ಮೇಲೆ ಒಂದು ಸತ್ತು ಬಿದ್ದ ಸಣ್ಣ ಇಲಿ ನೋಡಿ ಅದು ಕೆಳಗೆ ಬರುತ್ತದೆ. ಇರುವೆಗೆ ಸಿಹಿ ಪದಾರ್ಥ ಮೂಸಿಯೇ ಕಂಡುಹಿಡಿಯುವ ಶಕ್ತಿ. ಅಶ್ವತ್ಥದ ತುದಿಯ ಎಲೆಯ ಮೇಲೆ ಇದ್ದ ಜೇನಿನ ತೊಟ್ಟಿನ ಪರಿಮಳ ಇರುವೆಗೆ ಬಂದು ಅವನ್ನು

ತಿನ್ನುತ್ತದೆ. ಹಂಸಪಕ್ಷಿಯು ನೀರು ಮತ್ತು ಹಾಲು ಪ್ರತ್ಯೇಕಿಸುತ್ತದೆ. ನಾಯಿಯು ಮನೆ ಒಳಗೆ ರಾತ್ರೆ ಕಗ್ಗತ್ತಲೆಯಲ್ಲಿ ಬಿದ್ದ ಸಾಸಿವೆ ಕಾಳಿನ ಶಬ್ದಕೇಳಿ ಮನೆಯ ಒಳಗಿರುವ ಬೆಕ್ಕಿನ ಕೂಡೆ "ಒಂದು ಮುಡಿ ಬಿದ್ದ ಶಬ್ದ ಕೇಳಿದೆ. ಅದು ಬಿದ್ದದ್ದು ಏನು ಎಂದು ಕೇಳಲು ಅದು ಸಾಸಿವೆಕಾಳು ಎಂತ ಹುಡುಕಿ ನೋಡಿ ಬೆಕ್ಕು ಜವಾಬು ಕೊಟ್ಟಿತ್ತಂತೆ ಕುರುಡರು ಸ್ಪರ್ಶ ಜ್ಞಾನದಿಂದಲೇ ಪದಾರ್ಥ ಜ್ಞಾನ ಮಾಡಿಕೊಳ್ಳುತ್ತಾರೆ. ಜಾಡರ ಹುಳ ಸುಮಾರು ಒಂದು ಘಂಟೆಯ ವರೆಗೆ ಮಳೆ ಬರುವುದಿಲ್ಲೆಂತ ನಿಶ್ಚಯ ತಿಳಿದು ಬಲೆ ಕಟ್ಟುತ್ತದೆ. ಈ ಕುರಿತು ಒಂದು ಕಥೆ ಉಂಟು. ಒಬ್ಬ ಧನಿಕನು ಮಳೆಗಾಲದ ಗಾಳಿ ಮೋಡಗಳನ್ನು ನೋಡಿ ಕೊಡೆ ಇಲ್ಲದುದರಿಂದ ಘಾಬರಿಯಾಗಿ "ಮಳೆ ಬಂದಿತೇ?" ಎಂತ ಒಬ್ಬ ಕೃಷಿಕನ ಹತ್ತಿರ ಕೇಳಿದಾಗ, ಆತನು "ಇನ್ನು ಒಂದು ಘಂಟೆ ವರೆಗೆ ಮಳೆ ಬರಲಿಕ್ಕಿಲ್ಲ. ಇಗೊ, ಜಾಡರಹುಳ ಬಲೆ ಕಟ್ಟುತ್ತದೆ" ಎಂದನು. ಹೀಗೆ ತನಗಿಂತಲೂ ಅಲ್ಪ ಪ್ರಾಣಿಗಳಿಗೆ ಇರುವ ಯಾವ ಇಂದ್ರಿಯ ಸಾಮರ್ಥ್ಯವೂ ಮನುಷ್ಯನಿಗಿಲ್ಲ. ಆದರೂ ನಾನು ಎಲ್ಲಾ ಪ್ರಾಣಿಗಳಿಗಿಂತಲೂ ಶ್ರೇಷ್ಠ "ಅಹಂ ಬ್ರಹ್ಮಾಸ್ಮಿ" ಎಂತ ಎಣಿಸುತ್ತಾನೆ. ಇದು ಯಾವುದರ ಸಾಮರ್ಥ್ಯ ಎಂದರೆ "ದಿವ್ಯದೃಷ್ಟಿ ಅಥವಾ ಇಲಹಮ intuition ದ್ವಾರಾ ಪ್ರಕೃತಿಕಾ ಸ್ವಭಾವ ವಾದೊಂಕೆ ವಿಚಾರಸೆ ಸಬ ಪಹೆಲಿಯಾಂ ಹಲ ಹೋತಾಹ್ಯೆಂ" ಅಂದರೆ ಮನುಷ್ಯನು ತನ್ನ ದಿವ್ಯದೃಷ್ಟಿಯಿಂದ ವಿಚಾರಶಕ್ತಿಯಿಂದ ಎಲ್ಲಾ ಒಗಟುಗಳ ಉತ್ತರ ಕಂಡುಹಿಡಿಯುತ್ತಾನೆ (solves all puzzles). ಅವನು ಟಿಲೆಸ್ಕೊಪ್, ಮೈಕ್ರೋಸ್ ಕೋಪ್, ಮೆಗ್ನಿಶ್ಯಮ್ ವಾಯರ್, ಇತ್ಯಾಗಳ ದ್ವಾರ ಮತ್ತು ಅನೇಕ ಯುಕ್ತಿಗಳಿಂದ ವಿಶ್ವದಲ್ಲಿರುವ ಆನೆ, ಸಿಂಹ, ಸರ್ಪ, ಹುಲಿ, ವಿದ್ಯುತ್ ಶಕ್ತಿ ಇತ್ಯಾದಿ ಇಡೀ ವಿಶ್ವ ತನ್ನ ಅಧೀನ ಮಾಡಿಕೊಳ್ಳುತ್ತಾನೆ. ವಿಷವನ್ನು ಅಮೃತವನ್ನಾಗ ಮಾಡುತ್ತಾನೆ. ಆದ್ದರಿಂದ ಅಹಂ 'ಬ್ರಹ್ಮಾಸ್ಮಿ' ಅನ್ನುತ್ತಾನೆ ಎಂತ ಈ ವಿಚಾರಗಳು ಒಂದೆರಡು ಮಿನಿಟಿನೊಳಗೆ ನನ್ನ ಮನಸ್ಸಿಗೆ ಒಂದು ದೊಡ್ಡ ಜಲಪ್ರಳಯದಂತೆ ಬಂದು ನನಗೆ ತನ್ಮಯಾವಸ್ಥೆ ಬಂದು ದೇಹ ಮತ್ತು ವಿಶ್ವ ಮರೆತುಬಿಟ್ಟೆ. ನಂತರ 4 ಮೈಲು

ದೂರ ಕುದುರೆ ಬದಲಾಯಿಸುವ ಮುಜಲು ಬಂದಾಗ ಡ್ರ್ಯಾವರನು ಬ್ರೇಕ್ ಹಾಕಿದ ಶಬ್ದ ಕೇಳಿ ನಾನು ಎಚ್ಚತ್ತೆ. ಆಗ ಡ್ರ್ಯಾವರನು ನನ್ನ ಬಲ ಕೈ ರಟ್ಟೆಗೆ ಹಿಡಿದದ್ದು ನನಗೆ ತಿಳಿಯಿತು. "ನಿಮಗೆ ಜೀವ ಇರಲಿಲ್ಲ. ಕೆಳಗೆ ಬಿದ್ದರೆ ನನ್ನ ಮೇಲೆ ಸಂಬರು ಆದೀತೆಂದು ಹಿಡಿದದ್ದು" ಅಂದನು.

3. ಒಮ್ಮೆ ಮಧ್ಯಾಹ್ನ ಸಮಯ ಬಸ್ಸು ಕೊಡಿಯಾಲಬೈಲ್ ಇಗರ್ಜಿ ಎದುರು ಹೋಗುವಾಗ ಇಬ್ಬರು ಇಟಲಿಯನ್ ಕೆಥಲಿಕ್ ಗುರುಗಳು ತಮ್ಮ ಟೊಪ್ಪಿಗಳನ್ನು ಎತ್ತಿ ಹಿಡಿದದ್ದು ನೋಡಿ ಅವರ ಭಕ್ತಿ ಮಹತ್ವ ನನ್ನ ಮನಸ್ಸಿಗೆ ಹೋಗಿ ಕೂಡಲೆ ನನಗೆ ದೇಹದ ಮರವೆ ಬಿತ್ತು. ಕೂಳೂರು ಫೆರಿ ಹತ್ತಿರ ಬಸ್ಸು ನಿಂತಾಗ ನನ್ನೊಟ್ಟಿನ ಒಬ್ಬ ಪ್ರಯಾಣಿಕನು ನನ್ನ ಮೈ ಅಲ್ಲಾಡಿಸಿ ನನ್ನನ್ನು ಎಬ್ಬಿಸಿದನು.

4. ಒಮ್ಮೆ ಬಸ್ಸು ಕೂಳೂರಿನಿಂದ ಉಡ್ಪಿ ಕಡೆಗೆ ಬಿಟ್ಟ ಕೂಡಲೆ ನನ್ನ ಕಿಸೆಯಲ್ಲಿರುವ ಅವಧೂತ ಗೀತೆಯ ಕೆಲವು ಶ್ಲೋಕಗಳನ್ನು ಓದಿದ ಕೂಡಲೆ ನನಗೆ ತನ್ಮಯಾವಸ್ಥೆ ಬಂತು. ಮುಲ್ಕಿ ಕಡವಿನ ದೋಣಿಗಾರನು ನನಗೆ ಅಲ್ಲಾಡಿಸಿ " ಇಲ್ಲಿಯೇ ಕೂತುಕೊಳ್ಳುತ್ತೀರೊ ಉಡುಪಿಗೆ ಹೋಗುವುದಿಲ್ಲವೊ" ಎಂದಾಗ ನಾನು ಎಚ್ಚತ್ತೆ.

5. ಕಾರ್ಕಳದ ಮಾರಿಪೂಜೆ ಸಮಯ ಆರತಿಮಾಡುವಾಗ ನಾನು ಪ್ರತಿಮೆ ಕಡೆಗೆ ನೋಡಿದ ಕೂಡಲೆ ದೊಡ್ಡ ಪ್ರಕಾಶದ ಒಂದು ತೆರೆ ಆ ದೇವಿಯ ಮುಖದಿಂದ ಹೊರಟು ಶೀದಾ ಮಾರ್ಗಕ್ಕೆ ಇಳಿದುಬಂದು ನನ್ನನ್ನು ಮುಳುಗಿಸಿತು. ಸುಮಾರು ½ ಘಂಟೆ ತನ್ಮಯಾವಸ್ಥೆಯಲ್ಲಿದ್ದೆ.

6. ಒಂದು ಶುಕ್ರವಾರ, ಪುತ್ತೂರು ಮಸೀದಿಯಲ್ಲಿ ಕೂಡಿದ ಜಮಾತರೆಲ್ಲರು ಕೋಯಾ ಹೇಳುವ ಪ್ರಾರ್ಥನೆಯನ್ನು ಗುರುಗುರು ಎಂದು ಗುಣುಗುಟ್ಟುತ್ತಿರಲು ಅದನ್ನು ಕೇಳಿ ಸ್ವಲ್ಪ ಸಮಯ ತನ್ಮಯಾವಸ್ಥೆಯಲ್ಲಿದ್ದೆ.

7. ಒಂದು ಆದಿತ್ಯವಾರ ಹಂಪನಕಟ್ಟೆ ಮಿಲಾಗ್ರಿ ಇಗರ್ಜಿಯ ಎದುರಿನಿಂದ ಹೋಗುವಾಗ ಸಾವಿರಾರು ಜನರು ಮೊಣಕಾಲೂರಿ ಪ್ರಾರ್ಥನೆ ಮಾಡುವುದು ನೋಡಿ ಅಷ್ಟು ಹೆಚ್ಚು ಜನರಿದ್ದರೂ ಶುದ್ಧ ಮೌನ ನಿಶ್ಶಬ್ದ ಇದ್ದುದು ಕಂಡಕೂಡಲೆ "ಮೌನ ತೇಂಚಿ ಬ್ರಹ್ಮ" ಎಂಬ ಸೂಕ್ತಿ ನೆನಪಾಗಿ ಕೂಡಲೆ ತನ್ಮಯಾವಸ್ಥೆ ಪ್ರಾಪ್ತವಾಗಿ ಅರ್ಧ ಘಂಟೆ ನಿಂತಿದ್ದೆ.

8. ಒಂದು ಮನೆಯಲ್ಲಿ ನನಗೆ ಹಾಲು ಸಕ್ಕರೆ ಕೊಡಲು ಕೂಡಲೆ ನನಗೆ ಈ ಕೆಳಗಿನ ಅಭಂಗ ನೆನಪಾಗಿ ತನ್ಮಯಾವಸ್ಥೆ ಬಂತು. ಆ ಅಭಂಗ ಯಾವುದೆಂದರೆ:—

**14.** "ರಸನೆ, ವದನಾಮುಚಿ ಹೆಂಸಾರ ।
ಗೋರಸ, ಮಧುರಸ, ಇಕ್ಷುರಸ, ಸುಧಾರಸ, ನವರಸ,
ಹೆಂಹಿ ಆ ಸಾರ ॥ ೧ ॥
ತಳಮಳಸಿ ಕಿತಿಕರಿಸಿಕೀ ಹೆಂ, ವೇಥೆ ವೇಥಾಚಾರ ॥ ೨ ॥
ಭಕ್ತಮಯೂರಕೃಪಾಘನಈಶ್ವರ,ಉಘಡಿಲಮುಕ್ತಿದ್ವಾರ।
ರಸನೆ ವದನಾಮುಚಿ ಹೆಂ ಸಾರ॥ ॥ ೩ ॥

ಸುಮಾರು ಒಂದು ಘಂಟೆ ನಂತರ ಎಚ್ಚತ್ತೆ. ಆದರೆ ಹಾಲು, ಸಕ್ಕರೆ ಸವಿಯಲಿಲ್ಲಾ. ಪ್ರತಿ ಸರ್ತಿ ಈ ಅವಸ್ಥೆ ಬಂದ ಕೆಲವು ಸಮಯದ ವರೆಗೆ ವಿಷಯಗಳಲ್ಲಿ ಮನಸ್ಸು ಉದಾಸವಾಗುತ್ತದೆ.

9. ಕಾಸರಗೋಡಿನಲ್ಲಿ ನನ್ನ ನಂಬರು ತನಿಕೆಯನ್ನು ಮುಂದುವರಿಸಿಟ್ಟಿದುದರಿಂದ ಮೆಜಿಸ್ಟ್ರೆಟ್ ಕೋರ್ಟಿನಿಂದ ನಾನು ಕೋಟೆಬಾಗಿಲು ಜನ್ನಕ್ಕನ ಮನೆಗೆ ಹೋಗಿ ಕಾಲಿನ ಬೂಟು ಬಿಚ್ಚುವಾಗ ಸುಮಾರು ಒಂದು ಘಂಟೆ ಸಮಯ ಅವರು "ನೀನು ಹೇಗೂ ಮೂರು ಘಂಟೆಯ ರೈಲಿಗೆ ಮಂಗಳೂರಿಗೆ ಹೋಗುತ್ತಿ ಆದುದರಿಂದ ಎರಡು ಪರಮಾರ್ಥ ಶಬ್ದಗಳನ್ನು ಕಿವಿಗೆ ಹಾಕು" ಎಂದರು. ಆಗ ನಾನು ಈ ಕೆಳಗಿನ ಅಭಂಗ ವಿವರಿಸಿ ಹೇಳಲಿಕ್ಕೆ ಶುರುಮಾಡಿದೆ—

**15.** "ಜೀವಜೀವತಿ ಜೀವನಾ ಸಂಗೆಂ,
ಮತ್ಸ್ಯಾಮರಣ ತ್ಯಾವಿಯೊಗೆಂ ।
ಜಯಾಚಿತ್ತಿಂ ಜೈಸಾಭಾವ ತಯಾಜವಳಿಂ ತೈಸಾದೇವ ॥೧॥
ಸಕಳಾಂ ಪಡಿಯೆ ಭಾನು ಪರಿ
ತ್ಯಾಕಮಳಾಂಚಾಜೀವನು ॥ ॥ ೨ ॥
ತುಕಾಮ್ಹಣೆ ಮಾತಾ ಮಾಹೆತಾನುಲ್ಯಾಚಿ ಚಿತಾ ॥ ೩ ॥

ಈ ಅಭಂಗದಲ್ಲಿ ತುಕಾರಾಮನು ಮೂರು ದರ್ಜೆಯ ಭಕ್ತಿ ವಿವರಿಸುತ್ತಾನೆ. ಅದರ ಅರ್ಥ ಏನೆಂದರೆ—ಎಲ್ಲಾ ಪ್ರಾಣಿಗಳಿಗೂ ನೀರಿನಿಂದಲೇ ಜೀವನ.

ಆದ್ದರಿಂದ ನೀರಿಗೆ ಜೀವನ ಎಂದು ಮರಾಠಿಯಿಂದ ಹೇಳುತ್ತಾರೆ. ಆದರೆ ಮೀನನ್ನು ನೀರಿನ ಹೊರಗೆ ಹಾಕಿದಕೂಡಲೆ ಅದು ಸಾಯುತ್ತದೆ. ತೀವ್ರ ಅಭ್ಯಾಸಿಗೆ ದೇವರ ಮರವೆ ಬಿದ್ದಕೂಡಲೆ ತಾನು ಸತ್ತಹಾಗೆ ಆಗಿ ಅಷ್ಟು ಬೇಜಾರಪಡುತ್ತಾನೆ.

16. ಜೋದಮ್ ಗಾಫಿಲ್ ಸೋದಮ್ ಕಾಫಿರ ॥ ಅಂದರೆ ದೇವರನ್ನು ಮರೆತ ಒಂದು ಶ್ವಾಸವು ಸಹಾ ಭಕ್ತನನ್ನು ನಾಸ್ತಿಕನನ್ನಾಗಿ ಮಾಡುತ್ತದೆ. ಸೂರ್ಯನು ಎಲ್ಲಾ ಪ್ರಾಣಿಗಳಿಗೂ ಬೇಕಾದವನು, ಪ್ರೀತಿಯವನು. ಆದರೆ ಕಮಲವು ಸೂರ್ಯೋದಯ ಲಾಗಾಯಿತು ಸೂರ್ಯಾಸ್ತಮಾನದ ವರೆಗೆ ವಿಕಾಸವಾಗಿ ಸೂರ್ಯನ ಕಡೆಗೆ ಮುಖ ಮಾಡಿದ್ದು ಅಸ್ತದ ನಂತರ ಮುರುಟಿ ನೀರಿನೊಳಗೆ ಮುಳುಗುತ್ತದೆ; ತೊಟ್ಟಿಲಲ್ಲಿದ್ದ ಶಿಶುವಿನ ತಾಯಿಯು ಮನೆವಾರ್ತೆ ಕೆಲಸಕ್ಕೆ ಮನೆಯ ಹೊರಗೆ ಸಹ ಹೋಗಬೇಕಾಗಿ ಮಗುವಿನ ಹತ್ತಿರವೇ ಕುಳಿತುಕೊಳ್ಳ ದಿದ್ದರೂ ಮನೆಯ ಒಳಗೆ ಏನಾದರು ಶಬ್ದ ಆದರೆ ಫಕ್ಕನೆ ಹಿಡಿದ ಕೆಲಸ ಬಿಟ್ಟು ಮಗು ಇದ್ದಲ್ಲಿ ಓಡುತ್ತಾಳೆ. ಹೀಗೆ ಮೀನಿನ ಫಸ್ಟ್‌ಕ್ಲಾಸ್ ಭಕ್ತಿ. ಕಮಲದ ಸೆಕೆಂಡ್‌ಕ್ಲಾಸ್ ಭಕ್ತಿ. ತಾಯಿಯ ಥರ್ಡ್‌ಕ್ಲಾಸ್ ಭಕ್ತಿ. ತುಕಾರಾಮನು ವರ್ಣಿಸುವುದನ್ನು ವಿವರಿಸಿ ಹೇಳುವಾಗ ನನಗೆ ದೇಹದ ಮರವೆಬಿದ್ದು ನಾಲ್ಕು ಘಂಟೆಗೆ ಎಚ್ಚರಕ್ಕೆ ಬಂದೆ. ಮೂರು ಘಂಟೆಯ ರೈಲಿಗೆ ಹೋಗುವ ನಿರ್ಣಯ ತಪ್ಪಿತು. ಆದರೂ ಮನೆ ಗೇಟಿಗೆ ಹೋದಾಗ ಅಲ್ಲಿ ಒಬ್ಬ ಮಾಪಿಳ್ಳೆಹುಡುಗನು ನಿಂತಿದ್ದ. “ಸ್ಟೇಶನಿಗೆ ನಿಮ್ಮ ಪೆಟ್ಟಿಗೆ ಕೊಂಡುಹೋಗುವುದಕ್ಕೆ ಪೋಲಿಸ್ ನವರು ಹೇಳಿದ ಪ್ರಕಾರ ನಿಂತಿದ್ದೇನೆ“ ಎಂದನು. ಆಗ “ಮೂರು ಘಂಟೆ ರೈಲು ಹೋಯಿತೊ” ಎಂದು ಕೇಳಿದಕ್ಕೆ “ಇಲ್ಲ” ಎಂದನು. ಕೂಡಲೆ ಸ್ಟೇಶನಿಗೆ ಓಡಿದೆ. ಟಿಕೇಟು ತೆಗೆದುಕೊಂಡ ಹತ್ತು ಮಿನಿಟಿನಲ್ಲಿ ರೈಲು ಬಂತು. ರೈಲು ಹತ್ತಿದ ಕೂಡಲೇ “ಪರಮಾತ್ಮ ನನಗೋಸ್ಕರ ರೈಲು ಲೇಟು ಮಾಡಿ ತಂದಿಯೊ” ಎಂತ ಹೇಳಿ ಕೂಡಲೆ ತಿರಿಗಿ ತನ್ಮಯಾವಸ್ಥೆಯಲ್ಲಿದ್ದವನು ಉಳ್ಳಾಲ ಸಂಕದ ಮೇಲೆ ರೈಲು ಹೋಗುವ ಜೋರು ಶಬ್ದಕೇಳಿ ಎಚ್ಚತ್ತೆ.

10. ಕಾರ್ಕಳದ ಆನೆಕೆರೆ ಮಾರ್ಗವಾಗಿ ಹೋಗುವಾಗ ಒಮ್ಮೆ ಕೇರೆಹಾವು ಹಿಡಿದ ಒಂದು ಕಪ್ಪೆಯ ಕೂಗು ಕೇಳಿ ನನ್ನ ಗುರುದೇವ ದತ್ತಾತ್ರೇಯನ ಕೂಡೆ "ಪರಮಾತ್ಮ, ಇಲ್ಲವೆ ನಿನ್ನ ಮನಸ್ಸಿನ ಹಾಗೆಯೇ ನನ್ನದೂ ಸುಖದುಃಖಕ್ಕೆ ವಿರಹಿತವನ್ನಾಗಿ ಮಾಡು. ಇಲ್ಲವೆ ಆ ಕಪ್ಪೆಗೆ ಹಾವಿನ ಬಾಯಿಯಿಂದ ಬಿಡಿಸು. ನನ್ನಿಂದ ಅದರ ಕೂಗು ಕೇಳಲಿಕ್ಕಾಗುವುದಿಲ್ಲ" ಎಂದು ಪ್ರಾರ್ಥಿಸಿದೆನು. ಆಗ ಒಂದು ಹತ್ತಿರದ ತೆಂಗಿನಮರದಿಂದ ಒಂದು ತೆಂಗಿನಕಾಯಿ ಧೊಪ್ಪನೆ ಹಾವಿನ ಸಮೀಪ ಬಿತ್ತು. ಅದು ಓಡಿ ಹೋಯಿತು. ಕಪ್ಪೆ ನೀರಿಗೆ ಹಾರಿತು. ನನಗೆ ತನ್ಮಯಾವಸ್ಥೆ ಬಂದು ಮಾರ್ಗದ ಕಿನಾರೆ ಅರ್ಧ ಗಂಟೆ ಸ್ತಬ್ಧನಾಗಿ ನಿಂತೆನು.

11. ಕಾಸರಗೋಡಿನ ಒಂದು ಹೊಟೆಲಿನಲ್ಲಿ ನಾನು ಶೀರಾ ತಿನ್ನುವಾಗ ಈ ಕೆಳಗಿನ ಅಭಂಗ ಗ್ರಮೋಫೋನಿನಲ್ಲಿ ನನ್ನ ಕಿವಿಗೆ ಬಿತ್ತು. ಅದು ಯಾವುದೆಂದರೆ:—

**17.** ಆಂಬೆ ಕೇಳಿಂದ್ರಾಕ್ಷಘಡೂ ।
ನಾಮಾ ಪುಡೆಂ ಅವಘೆಂ ಕಡೂ ॥ ॥ ೧ ॥
ನಾಮ ಗೋಡ ನಾಮ ಗೋಡ ।
ಹರಿಮ್ಟುಣ ತಾಂ ಪುರೆ ಕೊಡ ॥ ॥ ೨ ॥
ಗೂಳ ಸಾಕರ ಕಾಯುಸಿ ನಿಕೀ ।
ಅಮೃತಾಚಿ ಚವಿರ್ಝಾಲಿ ಫಿಕೀ ॥ ॥ ೩ ॥
ಏಕಾ ಜನಾರ್ಧನಿಂ ಪಡಲಿ ಮಿಠಿ ।
ಚವಿ ಘೇತಲಿತೀ ಕದಾಂ ನುಠಿ ॥ ॥ ೪ ॥

ಈ ಅಭಂಗ ಕೇಳಿದ ಕೂಡಲೆ ನನಗೆ ತನ್ಮಯಾವಸ್ಥೆ ಬಂತು. ಎಚ್ಚತ್ತು ನೋಡುವಾಗ ನನ್ನ ತಲೆ, ಶರ್ಟು, ಉಟ್ಟ ವಸ್ತ್ರ ಎಲ್ಲಾ ಒದ್ದೆ ಆಗಿತ್ತು. "ನಿಮಗೆ ಫಿಟ್ಸ್ ಎಂತ ಎಣಿಸಿ ನಾನು ತಲೆಗೆ ತಣ್ಣೀರು ಹಾಕಿದೆ. ಮಾಫಿಮಾಡಬೇಕೆಂದು ಹೊಟೆಲ್ ಕೀಪರನು ಹೇಳಿದನು.

ನನ್ನ ಮುಹೂರ್ತದ ನಂತರ ನಾಲ್ಕು ವರ್ಷದ ವರೆಗೆ ನನಗೆ ಅನೇಕಾವರ್ತಿ ಕಾಲ್ನಡೆ ನಡೆಯುವಾಗ ಯಾ ಬಸ್ ಟ್ರೆನ್ಸಿಟ್, ಯಾ

ರೈಲಿನಲ್ಲಿ ಹೋಗುವಾಗ, ಯಾ ಕೋರ್ಟಿನಲ್ಲಿ ಸಹಾ ಕಣ್ಣು ಕೂರಿದಂತಾಗಿ ಮುಚ್ಚುವುದೂ ಆ ಕೂಡಲೆ ದೇವರ ಮುಖ, ಚರಣಗಳು ಯಾ ಸೊಂಟದ ಮೇಲ್ಭಾಗ ಶರೀರ ತೋರುತ್ತಿತ್ತು. ಅದು ಸ್ವಲ್ಪ ಹೊತ್ತಿನಲ್ಲಿ ಮೇಲಕ್ಕೆ ಹೋಗಿ ಮಾಯವಾಗುವ ವರೇಗೆ ನಾನು ಎಲ್ಲಿದ್ದೇನೆ, ನಡಿಯುತ್ತೇನೊ ಎಂಬ ಎಚ್ಚರ ಇರುತ್ತಿದ್ದಿಲ್ಲ.

12. ಕದ್ರಿ ಮಾರ್ಗವಾಗಿ ಹೋಗುವಾಗ ಬೆಳಿಗ್ಯೆ ಎಂಟು ಘಂಟೆ ಸಮಯ ಲಕಡಿಬಾವಾ ಎಂಬ ಒಬ್ಬ ಗಾಯಕನು ಭೈರವಿ ರಾಗ ಆಲಾಪನೆ ಮಾಡುವುದು ನನ್ನ ಕಿವಿಗೆ ಬಿದ್ದು ನಾನು ದೇಹ ಮರೆತು ಅರ್ಧ ಘಂಟೆ ನಂತರ ಎಚ್ಚತ್ತೆ.

13. ಅದೇ ಕದ್ರಿ ರಸ್ತೆಯಲ್ಲಿ ಬಂದಿವಾನರ ಕೆರೆ ಹತ್ತಿರ ಒಂದು ದಿವಸ ಹೋಗುವಾಗ ಕಣ್ಣುಗಳು ಕೂರಿ ಮುಚ್ಚಿದವು. ಕೂಡಲೆ ನನ್ನ ಗುರುದೇವನ ಮುಖ ನಾನು ಕಂಡು 15 ಮಿನಿಟಿನ ವರೆಗೆ ದೇಹ ಮರೆತೆನು.

14. ಒಂದು ಸಲ ನನಗೆ ಕುಂದಾಪುರದಲ್ಲಿದ್ದ ಗುಂಡಿಲ ಅನಂತಯ್ಯನ ಮಗಳು ಭಜನೆಪ್ರೇಮಿ ಗಿರಿಜಮ್ಮನ ಮನೆಗೆ ಪೆನ್ಶನ್ ಪೋಸ್ಟ್‌ಮಾಸ್ತರ ಭವಾನಿ ಭಟ್ಟರು ಕರೆದುಕೊಂಡು ಹೋಗಿ ಅಲ್ಲಿ ಒಂದು ತಿಂಗಳು ಇದ್ದೆ. ಆಗ ಒಂದು ದಿನ ನಾನು ಸ್ನಾನಮಾಡಿ ಒಳಗೆ ಬರುವಾಗ ತಲ್ಲೂರು ನಾಗಣೆ ಶ್ಯಾನುಭಾಗ ಪರಮೇಶ್ವರ ನಾಮರೆಂಬ 64 ವರ್ಷದ ಸ್ವಯಂಪಾಕಿ ನಿಸ್ಪೃಹರಾದ, ಜ್ಞಾನೇಶ್ವರಿ, ಏಕನಾಥಿ ಇತ್ಯಾದಿಗಳ ಪರಿಚಯ ಚೆನ್ನಾಗಿದ್ದ ಬ್ರಹ್ಮಚಾರಿ ಸಾರಸ್ವತ ಭಕ್ತಪ್ರೇಮಿಯು ಅಲ್ಲಿದ್ದ ಸ್ತ್ರೀಯರಿಗೆ ಜ್ಞಾನದೇವರ ಈ ಕೆಳಗಿನ ಅಭಂಗ ವಿವರಿಸಿ ಹೇಳುತ್ತಿದ್ದರು. ಅದು ಯಾವುದೆಂದರೆ:—

18. ಸತ್ಯಜ್ಞಾನಾನಂತ ಗಗನಾನಚೆಂ ಪ್ರಾವರ್ಣ । ನಾಹಿಂರೂಪ
ಗುಣವರ್ಣತೆಥೆಂ ॥ ೧ ॥ ತೋಹಾಡೊಳೆಭರಿ ಪಾಹಿಲಾ
ಶ್ರೀಹರಿ, ಪಾಹತಾಂ ಪಾಹಣೆ ದೂರಿಸಾರೊನಿಯಾಂ ॥ ೨ ॥
ಜ್ಞಾನದೇವ ಮ್ಹಣೆ ಜ್ಯೋತಿಚಿ ನಿಜ ಜ್ಯೋತಿ, ತಿಹಿ ಉಭಿ
ಮೂರ್ತಿ ವಿಟೇವರಿ ॥ ೩ ॥

ಈ ಅಭಂಗದ ಸ್ವಾನುಭವದ ಮರ್ಮ "ಪಾಹತಾಂ ಪಾಹಣೆ ದೂರಿ ಸಾರೊನಿಯಾಂ" ಎಂಬುದರ ಅರ್ಥ ಹೇಳಲಿಕ್ಕಾಗದೆ ಗಡಬಡಿಯಲ್ಲಿದ್ದರು. ಆಗ ನಾನು ಅದನ್ನು ವಿವರಿಸಿ ಹೇಳಿದೆ ಅಂದರೆ ನಾನು ನೋಡುತ್ತೇನೆಂಬ ಭಾವನೆಯನ್ನು ದೂರಮಾಡಿ ನೋಡಬೇಕು. ಅಂದರೆ ಮನಸ್ಸು ನಿಸ್ಸಂಕಲ್ಪ ಆಗಿ ಸಮಾಧಿಯಲ್ಲಿರಬೇಕೆಂದು ಹೇಳುವಾಗ ನನಗೆ ತನ್ಮಯಾವಸ್ಥೆ ಬಂತು. ಸ್ವಲ್ಪ ಹೊತ್ತಿನಲ್ಲಿ ನಾನು ಜಾಗ್ರತಾವಸ್ಥೆಗೆ ಬಂದಾಗ ಪರಮೇಶ್ವರಯ್ಯ ನನ್ನ ಕಾಲು ಗಟ್ಟಿ ಹಿಡಿದು ಜೋರಿನಿಂದ ಬಿಕ್ಕಿ ಬಿಕ್ಕಿ ಅಳಲಾರಂಭಿಸಿ ಬೊಬ್ಬೆ ಹೊಡೆದು ಕೂಗಲಿಕ್ಕೆ ಶುರುಮಾಡಿದರು. ಆ ಭಕ್ತಿಭಾವದ ವೇಗ ತೀರಿದ ನಂತರ ಈ ಅವಸ್ಥೆ ಪುಸ್ತಕದಲ್ಲಿ ನಾನು ಓದಿದ್ದೆ ಮಾತ್ರ ಅಲ್ಲದೆ ಕಣ್ಣಾರೆ ಕಾಣಲಿಲ್ಲ. ಇದರ ಪ್ರಾಪ್ತಿ ಉಪಾಯವೇನು ಎಂದು ಕೇಳಿದರು. ಗಾಯತ್ರಿಯ ಉಪಾಸನೆಯೇ ಎಂತ ಅವರಿಗೆ ಆ ಕುರಿತು ಕ್ರಮ ಹೇಳಿದೆ.

ರಾಮತೀರ್ಥ ಸ್ವಾಮಿಯವರು ಹೇಳುತ್ತಾರೆ:—

"When shall I be free?"
When "I" shall cease to be''

ಅಂದರೆ "ನಾನು" ಎಂಬ ಹಮ್ಮಿನ ಹಿಡಿತದಿಂದ ತಪ್ಪುವುದು ಹೇಗೆ? "ನಾನು" ಎಂಬ ಅಹಂಕಾರ ನಾಶವಾದ ಕೂಡಲೆ.

ಒಬ್ಬ ಪ್ರೇಮಿ ಭಕ್ತನು ಹೇಳುತ್ತಾನೆ:—

19. "ಮೈ ಸಮುಜತಾಥಾ ತೇರಾ ಪತ್ತಾನಹಿಂ ।
ಅಬ ಶಂಕರ ತೂಂ ಮಿಲಾ, ಅಬ ಮೇರಾ ಪತ್ತಾನಹಿಂ"

ಅಂದರೆ "ಶಂಭೂ ಶಂಕರನೇ ನಿನ್ನ ಪತ್ತೆಯೇ ಇಲ್ಲಾ ಎಂದು ನನ್ನ ಗ್ರಹಿಕೆ ಇತ್ತು. ಈಗ ನೀನು ಸಮಕ್ಷ ಸಿಕ್ಕಿದಿ. ಈಗ ನನ್ನ ಪತ್ತೆಯೇ ಇಲ್ಲಾ"

ಇನ್ನೊಬ್ಬ ಭಕ್ತ ಪ್ರೇಮಿ ಹೇಳುತ್ತಾನೆ:—

20. ಜಬ್ ಅಲಖ್ ಸಮುಜಸಾಕೊ ಮೊಮ ತುರಂಗ ಪರ
ಚಡಕರ ಪಾವಕಮೆ ಚಲಿಬೊ ॥

ಅಂದರೆ ಲಕ್ಷ್ಯಕ್ಕೆ ಬಾರದಿರುವ ಅಂದರೆ ಮನ ಬುದ್ಧಿ ಅಗೋಚರ ಬ್ರಹ್ಮಾನುಭವ ಬರಬೇಕಾದರೆ ಮೇಣದ ಕುದುರೆಯನ್ನೇರಿ ಬೆಂಕಿಯಲ್ಲಿ ಪ್ರವೇಶಿಸು, ಎಂತ.

ಮೇಲೆ ಹೇಳಿದ ಗಿರಿಜಮ್ಮನ ಮನೆಯಲ್ಲಿ ನಾನು ಭಕ್ತರತ್ನ ಪ್ರಹ್ಲಾದನ ಚರಿತ್ರೆ ವಿವರಿಸಿ ಹೇಳುವಾಗ ಅನೇಕ ಸಾರಿ ದೇಹದ ವಿಸ್ಮೃತಿಯಲ್ಲಿದ್ದೆ. ಆಗ ಇಬ್ಬರು ಭಕ್ತ ಸ್ತ್ರೀಯರು ಚಾವಡಿಯಲ್ಲಿ ಪ್ರೇಮಾವೇಶದಿಂದ ಅಳುತ್ತಾ ಹೊರಳಾಡುತ್ತಿದ್ದರು. ಪ್ರಹ್ಲಾದ ಚರಿತ್ರೆ ಮುಗಿಸಿದ ದಿವಸ ಒಂದು ಆರತಿ ತಂದು ಗಿರಿಜಮ್ಮ ಭವಾನಿ ಭಟ್ಟರ ಹತ್ತಿರಕೊಟ್ಟು ಪ್ರಹ್ಲಾದ ಚರಿತ್ರೆಯ ಪುಸ್ತಕಕ್ಕೆ ಓವಾಳಿಸುವರೆ ಹೇಳಿದರು. ಭಟ್ಟರು ಆ ಆರತಿ ಪುಸ್ತಕದ ಮುಂದೆ ಓವಾಳಿಸುವ ಬದಲಿಗೆ ನನ್ನ ಮುಖಕ್ಕೆ ಓವಾಳಿಸಿದರು. ಅದನ್ನು ನೋಡಿ ಒಬ್ಬ ಭಕ್ತಿ ಪ್ರೇಮಿಯು ನನ್ನ ಕಾಲಿಗೆ ಬಿದ್ದು ಕೂಗಿದಳು. ಕಾರಣವೇನೆಂದು ಕೇಳಿದಾಗ "ನಿನ್ನೆ ರಾತ್ರೆ ಸ್ವಪ್ನದಲ್ಲಿ ಭವಾನಿ ಭಟ್ಟರು ನಿಮಗೆ ಆರತಿ ಓವಾಳಿಸಿದ್ದು ನಾನು ಕಂಡಿದ್ದೆ. ಅದೇ ಈಗ ನಿಜವಾಯಿತು" ಎಂದಳು. ಅದರಿಂದ ಅವಳಿಗೆ ಪ್ರೇಮಾವೇಶ.

15. ಕುಂದಾಪುರಕ್ಕೆ ನಾನು ಒಂದು ಸಂಪ್ರೆಕ್ಕೋಸ್ಕರ ಹೋದಾಗ ಆದಿತ್ಯವಾರ ಮಧ್ಯಾಹ್ನ ಹನ್ನೊಂದುವರೆ ಗಂಟೆಗೆ ಭಜನೆ ಹೇಳುವಾಗ ನನಗೆ ದೇಹದ ವಿಸ್ಮೃತಿಬಿದ್ದು ರಾತ್ರೆ ಒಂಭತ್ತು ಗಂಟೆಗೆ ಎಚ್ಚರವಾಗಿದೆ.

16. ನಮ್ಮ ಜಿಲ್ಲೆಯ ಗಡಿಯಿಂದ ಎಂಟು ಮೈಲು ದೂರ ಕೆಂಪ್ಹೊಳೆ ಎಂಬಲ್ಲಿ ಆಸಪಾಸ ನಾಲ್ಕು ಮೈಲು ವಿಸ್ತೀರ್ಣಕ್ಕೆ ಯಾವ ಜನ ಸಂಚಾರವೂ, ವಾಸ್ತವ್ಯಗಳೂ ಇಲ್ಲದ ಕಾಡಿನಲ್ಲಿರುವ ಫೋರೆಸ್ಟ್ ಡಿಪಾರ್ಟಮೆಂಟಿನ ಒಂದು ರೆಸ್ಟ್ ಹೌಸಿನಲ್ಲಿ ಬೆಳಿಗ್ಗೆ ಏಳು ಗಂಟೆಗೆ ನಾನು ಕುದುರೆಯ ಮೇಲೆ ಶಿರಾಡಿಯಿಂದ ಹೋಗಿ ಚಾವಡಿಯಲ್ಲಿ ಒಂದು ಕುರ್ಚಿ ಇಟ್ಟು ಕೂತಿರುವಾಗ ದೊಡ್ಡ ಪಶ್ಚಿಮ ಘಟ್ಟಗಳನ್ನೂ ಕಾಡನ್ನೂ ನೋಡಿ ನನಗೆ ದೇವರ ಮಹತ್ವ ತಲೆದೋರಿ ತನ್ಮಯಾವಸ್ಥೆಯಲ್ಲಿ ಇದ್ದವನು ಹನ್ನೊಂದುವರೆ ಗಂಟೆಗೆ ಎಚ್ಚತ್ತಾಗ ನನ್ನ ಅಡಿಗೆ ಭಟ್ಟ, ಕುದುರೆ ಕಾಸಗಾರನು, ರೈಟರ, ನನ್ನ ಸಾಮಾನು ಹೊತ್ತ ಇಬ್ಬರು ಕೂಲಿಗಳು

ಬಂದು ನನ್ನ ಸುತ್ತು ನಿಂತು ಬೆರಗಾಗಿ ನೋಡುತ್ತಿರುವುದನ್ನು ಕಂಡೆ. ಅವರು ನನ್ನ ಕಣ್ಣುಗಳು ದೊಡ್ಡದಾಗಿ, ಕೆಂಪಾಗಿ ನೀರು ಧಾರಾಳವಾಗಿ ಸುರಿಯುತ್ತಿದ್ದುವು ಎಂದು ಹೇಳಿದರು. ನಾನು ಆ ನಾಲ್ಕೈವರೆ ಗಂಟೆಯೂ ದೇಹ ಮತ್ತು ವಿಶ್ವ ಮರೆತು ಸುಷುಪ್ತಿಯಲ್ಲಿದ್ದ ಹಾಗೆಯೇ ಇದ್ದೆ. ಈ ಸ್ಥಿತಿಗೆನೇ ಭಕ್ತರು ಪ್ರೇಮವೆಂತಲೂ, ಯೋಗಿಗಳು ನಿರ್ವಿಕಲ್ಪ ಸಮಾಧಿ ಎಂತಲೂ, ಜ್ಞಾನಿಗಳು ಬ್ರಹ್ಮಸ್ಥಿತಿ ಎಂತಲೂ, ಆತ್ಮಸ್ಥಿತಿ ಎಂತಲೂ, ಜೈನರು ನಿರ್ವಾಣ ಎಂತಲೂ, ಸೂಫಿಯರು ಫನಾಫಿಲ್ಲಾ ಎಂತಲೂ ಹೇಳುತ್ತಾರೆ. ಈ ಬ್ರಹ್ಮಸ್ಥಿತಿ ಪ್ರಾಪ್ತಿಯಾಗಲಿಕ್ಕೆ ಸಾಧನ **ಪರಾವಿದ್ಯಾ.**



# ದ್ವಿತೀಯ ಪ್ರಕರಣ—ಪರಾವಿದ್ಯಾ

## ೧. ಪರಾವಿದ್ಯಾ ಅಂದರೇನು ಅದಕ್ಕೆ ಸಾಧನೆ ಏನು?

ವಿದ್ಯೆ ದ್ವಿವಿಧ-ಪರಾ ಮತ್ತು ಅಪರಾ. ಇಷ್ಟಾ ಪೂರ್ತ, ದಾನ ಧರ್ಮ, ಯಾಗಯಜ್ಞ ಇತ್ಯಾದಿ ಹದಿನಾಲ್ಕು ವಿದ್ಯೆ ಅರುವತ್ತನಾಲ್ಕು ಕಲಾ ಇದೆಲ್ಲಾ ಅಪರಾವಿದ್ಯೆ. ಸ್ವದೇಹ ಮತ್ತು ವಿಶ್ವ ಮರೆತು ಸ್ವಸ್ವರೂಪ ಯಾನೆ ಬ್ರಹ್ಮಸ್ವರೂಪದಲ್ಲಿ ಲೀನನಾಗಿ ತನ್ಮಯಾವಸ್ಥೆಯಲ್ಲಿ ಸಮಾಧಿಯ ಲ್ಲಿರುವುದೆ ಪರಾವಿದ್ಯೆ. ಕೇವಲ ಸಚ್ಚಿದಾನಂದ ಧಾಮ ಪರಮಾತ್ಮನ ವಿಷಯದ ಭಕ್ತಿಯೋಗಕ್ಕೆ ಪುರುಷಾರ್ಥ ಎನ್ನುತ್ತಾರೆ. ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ ಹೀಗೆ ಪುರುಷಾರ್ಥ ಸಾಧನ ರೂಪ ಮೂರು ಯೋಗಗಳು ಪ್ರಸಿದ್ಧವಾಗಿವೆ. ಪರಾವಿದ್ಯಾ ಅಂದರೆ ಬ್ರಹ್ಮವಿದ್ಯಾ. "ವಿಕ್ಷೇಪ ಲಯಕಾಷಾಯ ನಿರಸೂನ ವೃತ್ತಿ ಬ್ರಹ್ಮಾಕಾರ ಹೋಣೆ ತಿಲಾ ಬ್ರಹ್ಮ ವಿದ್ಯಾ ಮ್ಹಣತಾತ"— ವಾಕ್ಯವೃತ್ತಿ.

ವೇದಾಂತ ಪ್ರಕಾರ ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗ. ಇಸ್ಲಾಮ್ ಮತ ಪ್ರಕಾರ ಹಕೀಕತ್, ತರೀಕತ್, ಶರೀಯತ್. ಜೈನ ಮತದ ಪ್ರಕಾರ ಸಮ್ಯಕ್ ಜ್ಞಾನ, ಸಮ್ಯಗ್ದರ್ಶನ, ಸಮ್ಯಕ್ ಚಾರಿತ್ರ ಎಂದು ಈ ಮೂರು ರತ್ನತ್ರಯಗಳು ಪ್ರಚಾರದಲ್ಲಿವೆ. ಜ್ಞಾನಯೋಗ ಮಸ್ತಿಷ್ಕ ಪ್ರಧಾನ. ಭಕ್ತಿಯೋಗ ಹೃದಯ ಪ್ರಧಾನ, ಕರ್ಮಯೋಗ ಪ್ರಾಣ ಮತ್ತು ಇಂದ್ರಿಯ ಪ್ರಧಾನ. ಈ ಮೂರು ಯೋಗಗಳು ಏಕ ಕಾಲ ಸರಿಸಮಾನ ಸಾಧಿಸಬೇಕು. ಆಗ ಪ್ರಾಣ, ಇಂದ್ರಿಯಗಳು ಹೃದಯ ಮತ್ತು ಮಸ್ತಿಷ್ಕ ವೃದ್ಧಿಯಾದಲ್ಲಿ, ಕರ್ಮಮಾರ್ಗದಿಂದ ಚಿತ್ತ ಶುದ್ಧಿ, ಭಕ್ತಿ ಮಾರ್ಗದಿಂದ ಸಾಧನ ಚತುಷ್ಟಯ, ಜ್ಞಾನ ಮಾರ್ಗದಿಂದ ಜ್ಞಾನೋತ್ತರ ಭಕ್ತಿ ಯಾನೆ ದಶಮ ಭಕ್ತಿ ಯಾನೆ ಪರಾಭಕ್ತಿಯಿಂದ ಭಕ್ತಿಭಾವ, ಭಕ್ತಿಪ್ರೇಮ ಪ್ರಕಟವಾಗಿ ಪ್ರೇಮಾವಸ್ಥೆಯಲ್ಲಿ ದೇಹ ಮತ್ತು ವಿಶ್ವ ಮರೆತು ಇರುವುದೇ ಪರಾವಿದ್ಯೆಯ ಅಭ್ಯಾಸದಿಂದ. ಚಿತ್ತಿಪ

ಭತ್ತದಿಂದ, ಹೊಂಬಣ್ಣದ ಪೈರು, ಪೈರಿನ ತಲೆಯ ಮೇಲೆ ಅನೇಕ ಭತ್ತಗಳ ಒಂದು ತೆನೆ ಕಂತೆಗಳ ರಾಶಿ (Shock of paddy) ಹುಟ್ಟುತ್ತದೆ. ಹಾಗೆಯೇ ಭಕ್ತಿಯಿಂದ ಜ್ಞಾನ, ಜ್ಞಾನದಿಂದ ಪರಾಭಕ್ತಿ ಯಾನೆ ದಶಮ ಭಕ್ತಿ ಯಾನೆ ಮಧುರಭಕ್ತಿ ಯಾನೆ ಜ್ಞಾನೋತ್ತರ ಭಕ್ತಿ ಬೆಳೆಯುತ್ತದೆ. ಅಗ್ಯ:—

21. ಜೀವಾತ್ಮ ಪರಮಾತ್ಮ ಯೋರೈಕತ್ವ ಜ್ಞಾನೇನ,
ತಯೋರ್ಭೇದ ಏವ ವಿಭಗ್ನಃ ಸಾ ಸಂಧ್ಯಾ ॥

ಅಂದರೆ ಜೀವಾತ್ಮಾ ಪರಮಾತ್ಮಾ ಒಂದೇ ಅಭಿನ್ನ ಬ್ರಹ್ಮ, ಸಚ್ಚಿದಾನಂದ ಬ್ರಹ್ಮ ಅದೇ ನಮ್ಮ ಸ್ವಸ್ವರೂಪ ಎಂದು ತಿಳಿದು ಆ ಎರಡು ಜೀವಾತ್ಮಾ ಪರಮಾತ್ಮಾ—ಇವರೊಳಗೆ ಭೇದ ಕಲ್ಪಿಸುವ ಎಲ್ಲಾ ಸಂಕಲ್ಪಗಳನ್ನು ನಾಶಮಾಡುವುದಕ್ಕೆನೇ ಜ್ಞಾನಿಯರು ಸಂಧ್ಯಾ ಎನ್ನುತ್ತಾರೆ. ಹಾಗೆಯೇ ಮನ್ಸೂರ್ ಮಸ್ತಾನನೆಂಬ ರಾಮ ಅಮಲಿನಿಂದ ಅಮಲ್ ಖೋರನಾಗಿ ಯಾವಾಗಲೂ ಸಾಯುವವರೇಗೆ ಅನಲ್ ಹಕ್ ಅಂದರೆ ನಾನು ಬ್ರಹ್ಮ, ಎಂದು ಧ್ವನಿಸುವ ಅದ್ವೈತಿಯು ಹೇಳುತ್ತಾನೆ:—

22. ಪಕಡಕರ್ ಇಷಕ್ ಕಾ ಝಾಡು
ಸಫಾಯ್ಕರ್ ಹಿಂಸ್ಸಏ ದಿಲ್ ಕೊ ॥

ಅಂದರೆ ಭಕ್ತಿ ಪ್ರೇಮ ಎಂಬ ಹಿಡಿಗುಂಟೆಯಿಂದ ದುಷ್ಟ ಮನವನ್ನು ಝಾಡಿಸಿ ಸಫಾಯಿ ಮಾಡು."

ಪಾರಮಾರ್ಥ ಪಥಿಕರ ತಲೆ ಒಡದು ಸೊತ್ತನ್ನೆಲ್ಲಾ ಅಪಹಾರ ಮಾಡುವ ದರೋಡೆಖೋರನು ಈ ಮನಸ್ಸು.

ತುಕಾರಾಮನು ಈ ಕೆಳಗಿನ ಅಭಂಗದಲ್ಲಿ ಮನಸ್ಸಿನ ಮಹತ್ವ ವರ್ಣಿಸುತ್ತಾನೆ.—

23. ಮನಕರಾರೆ ಪ್ರಸನ್ನ । ಸರ್ವಸಿದ್ಧಿಚೆಂ ಕಾರಣ ॥
ಮೋಕ್ಷಅಥವಾಬಂಧನ।ಸುಖಸಮಾಧಾನಇಚ್ಛಾತೆ॥೧॥
ಮನೆಂ ಪ್ರತಿಮಾ ಸ್ಥಾಪಿಲಿ। ಮನೆಮನಾ ಪೂಜಾಕೇಲಿ ॥
ಮನೆಂ ಇಚ್ಛಾಪುರವಿಲಿ। ಮನಮಾವುಲಿ ಸಕಳಾಂಚಿ॥೨॥

ಮನ ಗುರು ಆಣಿ ಶಿಷ್ಯ । ಕರಿ ಆಪುಲೆಂಚಿ ದಾಸ್ಯ ॥
ಪ್ರಸನ್ನ ಆಪ ಆಪಣಾಸ । ಗತಿ ಅಥವಾ ಅಧೋಗತಿ ॥ ೩ ॥
ಸಾಧಕ ವಾಚಕ ಪಂಡಿತ । ಶ್ರೋತೆ ವಕ್ತೆ ಐಕಾ ಮಾತ ॥
ನಾಹಿಂ ನಾಹಿಂ ಆನ ದೈವತ । ತುಕಾಮ್ಹಣೆ ದುಸರೆಂ ॥ ೪ ॥

ಈ ದುರ್ಜಯ ಮಹಾಶತ್ರುವನ್ನು ನಾಶಮಾಡಿ ವಿಜಯಪಡೆಯಲಿಕ್ಕೆ ನಾವು ನರಜನ್ಮ ತೆಗೆದುಕೊಳ್ಳುವುದು.

**24.** "ಚಂಚಲಂಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ।
ತಸ್ಯಾಹಂ ನಿಗ್ರಹಂ ಮನ್ಯೇವಾಯೋರಿವ ಸುದುಷ್ಕರಂ ॥

ಅಂದರೆ "ಕೃಷ್ಣಾ ಮನಸ್ಸು ಚಂಚಲ, ಉಗ್ರ, ಬಲಿಷ್ಠ ಮತ್ತು ಅಭೇದ್ಯ, ಅದನ್ನು ಬಂಧನೆಯಲ್ಲಿಡುವುದು ವಾಯುವಿಗೆ ಬಂಧನ ಮಾಡುವಷ್ಟೇ ಕಠಿಣ ಕಾರ್ಯ ಎಂತ ತನಗೆ ತೋರುತ್ತದೆ" ಎಂತ ಅರ್ಜುನನು ಹೇಳಲು

**25.** "ಅಸಂಶಯಂ ಮಹಾಬಾಹೊ ಮನೋದುರ್ನಿಗ್ರಹಂಚಲಂ ।
ಅಭ್ಯಾಸೇನತು ಕೌಂತೆಯ ವೈರಾಗ್ಯೇಣಚ ಗೃಹ್ಯತೇ" ॥

ಅಂದರೆ "ಹೇ ಮಹಾಬಾಹೊ ಈ ಮನಸ್ಸು ಚಂಚಲ ಮತ್ತು ಕಟ್ಟಿಡಲಿಕ್ಕೆ ಬಹಳ ಕಠಿಣ ಎಂಬುದು ನಿಸ್ಸಂಶಯ. ಆದರೆ ಹೇ ಕೌಂತೆಯ ಇದನ್ನು ಅಭ್ಯಾಸದಿಂದಲೂ ವಿರಕ್ತಿಯಿಂದಲೂ ಸ್ವಾಧೀನಮಾಡಬಹುದು" ಎಂದು ಶ್ರೀ ಕೃಷ್ಣನು ಹೇಳಿದನು. [ಭ. ಗೀ. ಅ. 6. ಶ್ಲೋಕ 32. 34.]

ಇಲ್ಲಿ ಶ್ರೀ ಕೃಷ್ಣನು ನಮೂದಿಸಿದ ಅಭ್ಯಾಸಕ್ಕೆ ಬ್ರಹ್ಮಾಭ್ಯಾಸ ಯಾ ಆತ್ಮಾಭ್ಯಾಸ ಎನ್ನುತ್ತಾರೆ. ಅದು ಯಾವುದೆಂದರೆ:—

**26.** ತಚ್ಚಿಂತನಂ ತತ್ಕಥನಂ ತದನ್ಯೋನ್ಯ ಪ್ರಬೋಧನಂ ।
ಏತದೇಕ ಪರತ್ವಂಚ ಬ್ರಹ್ಮಾಭ್ಯಾಸ ವಿದುರ್ಬುಧಾಃ ॥

ಅಂದರೆ ಏಕಾಕಿ ಆದರೆ ಬ್ರಹ್ಮಚಿಂತನೆ ಮಾಡುವುದು, ಸತ್ಸಂಗ ಆದರೆ ಸಂಗಿಯೊಡನೆ ಬ್ರಹ್ಮಸ್ವರೂಪದ ಕುರಿತೇ ಮಾತಾಡುವುದು, ತನ್ನ ಹಾಗೆಯೇ ಬ್ರಹ್ಮಾಭ್ಯಾಸಿ ಆದರೆ ಆತನ ಮತ್ತು ತನ್ನ ಪರಸ್ಪರ ಸಾಧನಾಭ್ಯಾಸದ ಕುರಿತು ಪರ್ಯಾಲೋಚಿಸಿ ಅನುಭವ ತಿಳಿದುಕೊಳ್ಳುವುದು.

ಸಮಾಧಿ ಅಭ್ಯಾಸ ಇದ್ದರೆ ಒಂಟಿಯಾಗಿ ಸತ್ಯಸ್ವರೂಪದಲ್ಲಿ ಮಗ್ನನಾಗು ವುದು— ಈ ಚತುಷ್ಪ್ರಕಾರದ ಅಭ್ಯಾಸಕ್ಕೆ ಬ್ರಹ್ಮಾಭ್ಯಾಸ ಯಾ ಆತ್ಮಾಭ್ಯಾಸ ಎನ್ನುತ್ತಾರೆ.

ಈ ಅಭ್ಯಾಸ ಮಹಾದೇವ ರುದ್ರನೂ ಸಹಾ ಈಗಲೂ ಮಾಡುತ್ತಾ ನೆಂದು ನಿವೃತ್ತಿನಾಥನ ಈ ಕೆಳಗಿನ ಅಭಂಗದಿಂದ ಸ್ಪಷ್ಟವಾಗುತ್ತದೆ:—

27. "ಸಾಂಡುನಿಯಾಂ ಸರ್ವ ಕೈಲಾಸ ಸಂಪತ್ತಿ ।
ಸ್ಮಶಾನಾಂತ ರುದ್ರೆಂ ವಸ್ತಿಕೇಲಿ ॥ ೧ ॥
ಕಾಸಯಾ ಕಾರಣೆಂ ಬ್ರಹ್ಮಸಾಧಾವಯಾಂ ।
ಕೋಕೊನಿಯಾ ಆಲಾಮುಝಾ ಮೀಚ ॥ ॥ ೨ ॥
ಅದ್ಯಾಪಿ ತಯಾಸಿ ಸಕಳೀಚಿ ಕಾಂಹಿಂ ।
ರಾಹಿಲಾಸಂದೇಹಿಂ ಅಜುನೀತೊ ॥ ॥ ೩ ॥
ಹರಿ ಬ್ರಹ್ಮಾಸೂರ್ಯಾ ಯೆರಾಂ ಕೋಣ ಲೇಖಿ ।
ನಾಹಿಂಚ ಓಳಖೀ ಮೂಳ ರೂಪಿಂ ॥ ॥ ೪ ॥
ಬಾಪರಖುಮಾಯಿ ದೇವಿವರು ವಸ್ತುಪರಾತ್ಪರು ।
ನಿವೃತ್ತಿ ಕೃಪಾಕೀರು ಭೇದಿಜೆ ಕಾಂ ॥ ॥ ೫ ॥

ಈ ಬ್ರಹ್ಮಾಭ್ಯಾಸಕ್ಕೆ ಸರಿಯಾಗಿ ಒಬ್ಬ ಭಕ್ತನು ಈ ಕೆಳಗಿನ ಅಭಂಗದಲ್ಲಿ ಪ್ರಥಮ ಚರಣದಲ್ಲೇ ಈ ಚತುಷ್ಪ್ರಕಾರ ಸಾಧನೆ ಹೇಳುತ್ತಾನೆ:—

28. (i) ಹರಿಚಾ ಛಂದ ಘೇವುಂ ।
(ii) ಹರಿನಾಮಿಂ ರತ ಹೋವುಂ ।
(iii) ಸಾವುಳೆಂ ಸಗುಣ ಭಾವುಂ ।
(iv) ಹರಿರೂಪಿಂ ಧ್ಯಾವುಂ ॥ ಹರಿಜಾಛಂದ ಘೆವುಂ ॥ ಧ್ರು ॥
ಗೋವಿಂದ ಹರಿನಾಮ ಮುನಿಜನ ಮನವಿರಾಮ ।
ಮಿಳವುಂ ಚಿತ್ಸುಖಧಾಮ । ಆರಾಮ ಪಾವುಂ ॥ ೧ ॥
ಜನ್ಮನಿ ಸಫಲಕಾಜ ವ್ಹಾವಯಾಂತ್ಯಜುನಿಲಾಜ ।
ಶ್ರೀ ಕೃಷ್ಣ ಗುರುರಾಜ । ಚರಣಕಮಲ ಸೇವುಂ ॥ ೨ ॥

ಹೀಗೆ ಬ್ರಹ್ಮಾಭ್ಯಾಸ ಮತ್ತು ವೈರಾಗ್ಯದಿಂದ ಮನೋನಾಶ ಸಾಧ್ಯ ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ.

ಈ ಸಚ್ಚಿದಾನಂದ ಘನು ಪರಮಾತ್ಮನ ಭಕ್ತಿಯೋಗಕ್ಕೆ ಪುರುಷಾರ್ಥ ಎನ್ನುತ್ತಾರೆ. ಈ ಪುರುಷಾರ್ಥಕ್ಕೆ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗ ಈ 3 ಯೋಗಗಳು ಸಾಧಿಸಬೇಕು.

## ೧. ಭಕ್ತಿಯೋಗ

1. ನಾರದನ ಭಕ್ತಿಸೂತ್ರದಲ್ಲಿ ಭಕ್ತಿ "ಪರಮ ಪ್ರೇಮಸ್ವರೂಪ ಎಂತಲೂ, ಪ್ರೇಮ ಅಂದರೆ ಅನಿರ್ವಾಚ್ಯ ಸಮಾಧಾನ ಎಂತಲೂ, ಈ ಸಮಾಧಾನ ಎಂಬುದರ ಅರ್ಥ 11 ಪರ್ಯಾಯಪದಗಳಿಂದ ವಿವರಿಸುತ್ತಾನೆ. ಅವು ಯಾವುವೆಂದರೆ—

| | | |
|---|---|---|
| ಸಂಗತ್ಯಾಗ | ಅನುಭವ | ವಿಶ್ವ ಅಭಾವ ಹೋಣೆ |
| ಸಹಜ ಸ್ಥಿತಿ | ಆತ್ಮನಿವೇದನ | ಉನ್ಮನಿ |
| ಸಾಕ್ಷಾತ್ಕಾರ | ವಿಜ್ಞಾನ | ದ್ವೈತಾನುಸಂಧಾನ ಪೂರ್ಣ |
| ಅಲಿಪ್ತತಾ | ವಿದೇಹ ಸ್ಥಿತಿ | ತುಟನೆ. |

ಈ 11 ಪರ್ಯಾಯ ಪದಗಳ ಅರ್ಥ ಒಂದೇ—ಸಂಗತ್ಯಾಗ. ಯಾವುದರ ಸಂಗ? ಅಂದರೆ "**ಮನಸ್ಸಿನ ಸಂಗ**"

ಯೋಗ ವಾಸಿಷ್ಠದ ಶಿಖಿಧ್ವಜ—ಚೂಡಾಲಾಖ್ಯಾನದಲ್ಲಿ ಶಿಖಿಧ್ವಜ ರಾಜನು ತನ್ನ ರಾಜ್ಯ, ರಾಣಿ, ಸರ್ವ ದೇಹ ಸಂಬಂಧದ ವಿತ್ತವನ್ನು ತ್ಯಾಗಮಾಡಿ ವೈರಾಗ್ಯ ತಾಳಿ ಕಾಡಿಗೆ ಶಾಂತಿ ಪ್ರಾಪ್ತಿ ಬಗ್ಗೆ ಹೋದನು. ಆತನ ಪತ್ನಿ ಚೂಡಾಲಾ ಜ್ಞಾನೀಭಕ್ತಳಾಗಿದ್ದಳು. ಅವಳು ತನ್ನ ಯೋಗ ಬಲದಿಂದ ತನ್ನ ಗಂಡನಿಗೆ ಕಾಡಿನಲ್ಲಿ ಶಾಂತಿ ಪ್ರಾಪ್ತಿಯಾಗಿದೆಯೋ ಎಂದು ನೋಡುವ ಬಗ್ಗೆ ತಾನು ದೇವಲೋಕದಿಂದ ಶಾಪಗ್ರಸಳಾಗಿ ಭೂಲೋಕಕ್ಕೆ ಬರಬೇಕಾಯಿತು ಎಂದು ಕಟ್ಟುಕಥೆಯನ್ನು ಒಬ್ಬ ಪುರುಷನ ವೇಷದಲ್ಲಿ ಕಾಡಿಗೆ ಬಂದು ಶಿಖಿಧ್ವಜನಿಗೆ ಹೇಳಿ, "ನಿನಗೆ ಶಾಂತಿ ಪ್ರಾಪ್ತಿ ಆಯಿತೋ?" ಎಂದು ಕೇಳಿದಳು. ಇಲ್ಲ ಎಂದು ಆತನು ಹೇಳಲು, ನೀನು ನಿನ್ನ ಸರ್ವಸ್ವವನ್ನೂ ಬಿಡು, ಆಗ ಮಾತ್ರ ಶಾಂತಿ ಪ್ರಾಪ್ತಿಯಾಗುತ್ತದೆಂತ ಆ ಕಪಟ ಪುರುಷ ಹೇಳಿದನು. ಅದಕ್ಕವನು—"ನಾನು ನನ್ನ ರಾಜ್ಯ, ಪತ್ನಿ, ಸಿಂಹಾಸನ, ಎಲ್ಲಾ ಸಂಪತ್ತು ಬಿಟ್ಟಿರುತ್ತೇನೆ" ಎಂದನು.

ಅದಕ್ಕೆ ಆ ವೇಷಧಾರಿಯು "ನೀನು ಈಗ ಹೇಳಿದ್ದೆಲ್ಲಾ ಬ್ರಹ್ಮನ ಸೃಷ್ಟಿ. ನಿನ್ನದು ಇನ್ನೂ ನೀನು ಬಿಡಲಿಲ್ಲ" ಅಂದನು, ಆಗ ಆತನು ಕಾಡಿನಲ್ಲಿ ತಾನು ಕಟ್ಟಿದ ಕುಟಿ, ನೀರು ತರುವ ಸೋರೆಬುರುಡೆ, ತನ್ನ ಕೌಪೀನ ಮತ್ತು ಕೌಪೀನ ಸೊಂಟಕ್ಕೆ ಕಟ್ಟುವ ಚಾಟಿಯನ್ನೂ ಸಹಾ ಬೆಂಕಿ ಹಾಕಿ ಸುಟ್ಟನು. ಕೆಲವು ಕಾಲದ ನಂತರ ತಿರಿಗಿ ಅದೇ ಪ್ರಕಾರ ಕಾಡಿಗೆ ಬಂದು ಚೂಡಾಲೆಯು ಅದೇ ವೇಷದಲ್ಲಿ "ಈಗಲಾದರೂ ಶಾಂತಿ ಪ್ರಾಪ್ತಿ ಆಯಿತೊ" ಎಂತ ಕೇಳಿದಾಗ "ಇಲ್ಲ ಎಂದನು." "ನೀನು ನಿನ್ನದು ಇನ್ನು ಬಿಡಲಿಲ್ಲ" ಎನಲು, "ಇನ್ನು ನನ್ನದು ದೇಹ ಮಾತ್ರ. ಇದನ್ನು ಸಹಾ ಬಿಡುತ್ತೇನೆ" ಎಂದನು. ಆಗ ಆ ಪುರುಷನು "ದೇಹ ನಿನ್ನದಲ್ಲ. ಅದು ಕಾಲನದು. ಧನ ಎಲ್ಲಾ ಕುಬೇರನದು. ನಿನ್ನದು ಬಿಡು" ಎನಲು, "ದೇಹ ವ ದೇಹ ಸಂಬಂಧ ನಿನ್ನದೆಂದು ಕಲ್ಪಿಸುವ ಆ **ಮನಸ್ಸು ಮಾತ್ರ ನಿನ್ನದು.** ಅದನ್ನು ಬಿಟ್ಟು ನಿಸ್ಸಂಕಲ್ಪ, ನಿರ್ವಿಕಲ್ಪ ನಾಗು. ಆಗ ಶಾಂತಿ ಪ್ರಾಪ್ತಿ ಆಗುವುದು" ಎಂದು ಹೇಳಿ ಕಾಡಿನಿಂದ ಆ ವೇಷಧಾರಿ ಹೋದನು. ಅದರ ಸ್ವಲ್ಪ ಸಮಯದ ನಂತರ ಚೂಡಾಲೆಯು ತನ್ನ ನಿಜ ರೂಪದಿಂದ ಗಂಡನಿಗೆ ಕಾಣಲಿಕ್ಕೆ ಸಿಕ್ಕಿ "ಈಗಲಾದರೂ ಶಾಂತಿ ಪ್ರಾಪ್ತಿ ಆಯಿತೊ" ಎನಲು, ಆತನು ಮೌನದಿಂದ ಇದ್ದು ಬ್ರಹ್ಮಾನಂದದಲ್ಲಿ ಇದ್ದಂತೆ ಅವಳಿಗೆ ತೋರಿತು. ಆದರೂ ಇವನ ಪರೀಕ್ಷೆಮಾಡಬೇಕೆಂದು ಅವನು ಸ್ನಾನಕ್ಕೆ ಹೋಗಿ ವಾಪಸು ಬರುವಾಗ ಒಬ್ಬ ಮಾಯೆಯು ಪರ ಪುರುಷನೊಂದಿಗೆ ಕ್ರೀಡಿಸುವವಳಾದಳು. ಅದನ್ನು ನೋಡಿ ಆತನು ಎಳ್ಳಷ್ಟಾದರೂ ಸಿಟ್ಟಾಗದೆ "ಒಬ್ಬ ಈಶ್ವರನು ಎರಡು ಪುರುಷ ಸ್ತ್ರೀ ರೂಪದಿಂದ ಕ್ರೀಡಿಸುತ್ತಾ ನೆಂತನೆನಸಿ ಶಾಂತನಾಗಿ ಇದ್ದದ್ದು ನೋಡಿ ಅವನನ್ನು, "ದ್ವಂದ್ವಾತೀತನಾಗಿ ಮನಸ್ಸು ನಾಶಮಾಡಿದ ನೀನು ಕಾಡಿನಲ್ಲಿರುವುದು ಯಾಕೆ? ನಿನಗೀಗ ಏಕಾಂತ ಲೋಕಾಂತ ಶ್ರೀಕಾಂತ. ನೀನು ರಾಜಧಾನಿಗೆ ಬಂದು ಮುಂಚಿ ನಂತೆ ರಾಜ್ಯಭಾರ ಕೈಕೊಳ್ಳಬಹುದೆನಲು ಅದಕ್ಕವನು ಒಪ್ಪಿ ಅವಳನ್ನು ಹಿಂಬಾಲಿಸಿ ಅರಮನೆಗೆ ಹೋದನು ಎಂತ ಆ ಆಖ್ಯಾನದಲ್ಲಿ ಹೇಳಿಯದೆ.

ಭಕ್ತಿಗೆ 3 ರೂಪಗಳು— ಭಕ್ತಿಭಾವ, ಭಕ್ತಿಪ್ರೇಮ ಮತ್ತು ಭಕ್ತಿ ಆವೇಶ.

## ೩. ಭಕ್ತಿಭಾವ

ಭಕ್ತಿಭಾವ ಅಂದರೆ ನಾಮ ಸ್ಮರಣೆಯಿಂದ ಸತ್ವಗುಣಾಧಿಕ್ಯದಿಂದ ಅವರ ಅಷ್ಟ ಸಾತ್ವಿಕ ಭಾವಗಳು ಭಕ್ತನಲ್ಲಿ ಪ್ರಕಟ ಆಗಬೇಕು. ಅವು ಯಾಾವವೆಂದರೆ ಪ್ರೇಮಾಶ್ರು, ರೋಮಾಂಚ, ಗದ್ಗದ ಕಂಠ, ಕಂಪ, ಸ್ವೇದ, ವೈವರ್ಣ, ಆನಂದ ಮತ್ತು ತಟಸ್ಥತೆ, (ಈ ವಿಷಯ ಏಕನಾಥನ 37ನೇ ಅಭಂಗ ನೋಡಿರಿ. (ಇವುಗಳ ಪೈಕಿ ಮೂರರಿಗಿಂತ ಹೆಚ್ಚು ಒಂದೇ ಸರ್ತಿ ಪ್ರಕಟವಾದರೆ ತಟಸ್ಥನಾಗಿ ಭಕ್ತನು ಸವಿಕಲ್ಪ ಸಮಾಧಿಯಲ್ಲಿರುತ್ತಾನೆ. ಹಾಗೆಯೇ ಪದೇ ಪದೇ ಸಮಾಧಿಯಲ್ಲಿದ್ದರೆ ಕ್ರಮೇಣ ನಿರ್ವಿಕಲ್ಪ, ನಿಸ್ಸಂಕಲ್ಪನಾಗಿ ದೇಹ ಮತ್ತು ವಿಶ್ವವನ್ನು ತೀರಾ ಮರೆತು ಇರುತ್ತಾನೆ. ಈ ಸ್ಥಿತಿಗೆ ಭಕ್ತಿಪ್ರೇಮ ಎನ್ನುತ್ತಾರೆ. ಭಕ್ತಿಭಾವ ಅಂದರೆ ಆತ್ಮಸಾಕ್ಷಾತ್ಕಾರದ ನೆನಪಾದಕೂಡಲೆ ತಟಸ್ಥನಾಗುವುದು. ಭಕ್ತಿಪ್ರೇಮ ಅಂದರೆ ದೇಹ ಮತ್ತು ವಿಶ್ವ ಪೂರ್ಣ ಮರೆತು ತನ್ಮಯಾವಸ್ಥೆಯಲ್ಲಿ ಸುಷುಪ್ತಿಯಲ್ಲಿದ್ದಂತೆಯೇ ಇರುವುದು.

ಈ ಭಕ್ತಿ ಸಾಧನೆಗೆ ಮೇಲೆ ಹೇಳಿದ ಹರಿಚಾ ಛಂದಘೇವುಂ ಎಂಬ ಅಭಂಗದಲ್ಲಿ ತಪಸೀಲು ಹೇಳಿದ ಚತುಷ್ಪ್ರಕಾರದ ಅಭ್ಯಾಸ ಮಾಡಬೇಕು.

**"ಹರಿಚಾಛಂದಘೆವುಂ"** ॥ ಛಂದ ಅಂದರೆ ಹೌಂಸ, ಹವ್ಯಾಸ, ಹುಚ್ಚು, ಖೋಡಿ, ಪ್ರೀತಿ. ಹರಿಯ ಛಂದ ಅಥವಾ ಹುಚ್ಚು, "ಲಾವಿಮನಾಪಿಸೆಂಗೋವಿಂದಾಚೆಂ" ತಾಗಬೇಕಾದರೆ ಆ ಹರಿಯ ಮಹತ್ವ. ಆತನು ಭಕ್ತರಿಗೆ ಅನುಗ್ರಹ ಮಾಡಿ ಅವರ "ಯೋಗಕ್ಷೇಮ ವಹಾಮ್ಯಹಂ" ಇದು ಹ್ಯಾಗೆ ಜ್ಯಾರಿಮಾಡಿದ್ದಾನೆ? ಎಂತ ಅವನ ಅವತಾರ ಕೃತ್ಯ, ಭಕ್ತವತ್ಸಲತಾ, ಆತನ ಚರಿತ್ರೆ ತಿಳಕೊಂಡು ಶ್ರದ್ಧೆಯಿಂದ ಭಕ್ತ ವಿಜಯ, ಸಂತ ಲೀಲಾಮೃತ, ನಾಥ ಲೀಲಾಮೃತ, ದತ್ತ ಪ್ರಬೋಧ, ಹರಿ ವಿಜಯ, ರಾಮ ವಿಜಯ ಇತ್ಯಾದಿ ಗ್ರಂಥಗಳ ಮೂಲಕ ತಿಳಕೊಂಡು ಪುರಾಣ, ಇತಿಹಾಸ, ಆಖ್ಯಾನಗಳ ಪಠನದಿಂದ ಶ್ರೀ ಹರಿಯು ಭಕ್ತರನ್ನು ರಕ್ಷಿಸಲಿಕ್ಕೆ ದುಷ್ಟರ ನಿಗ್ರಹ, ಶಿಷ್ಟರ ಪರಿಪಾಲನ ಕೈಕೊಂಡು, ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಇತ್ಯಾದಿ ಕೀಳು

ಪಾಲಯ ॥ ೯ ॥ ಶಿಷ್ಟಜನಾವರ ದುಷ್ಟಹರಾ । ಖಗ
ತುರಗೊತ್ತಮ ವಾಹನತೆ । ಕಲ್ಕಿರೂಪಿ ಪರಿಪಾಲಯಮಾಂ
ಭಕ್ತಂತೆ ಪರಿಪಾಲಯ ॥ ೧೦ ॥

ವಿಷ್ಣುವಿನ 10 ಅವತಾರಗಳ ಅರ್ಥ 3 ವಿಧದಲ್ಲಿ ಗ್ರಹಿಸಬಹುದು:–

(i) ಈ ಮೇಲಿನ ಸ್ತೋತ್ರದಲ್ಲಿರುವಂತೆ ಪುರಾಣಗಳ ಕಥೆಗಳು ಸತ್ಯವೆಂತ ಶ್ರದ್ಧಾಯುಕ್ತವಾಗಿ ನಂಬಬಹುದು.

(ii) ಯೋಗ ವಸಿಷ್ಠದಲ್ಲಿ ಕಾಕಭುಶುಂಡಿ ಎಂಬ ಕಾಗೆರೂಪ ದಿಂದ ಒಂದು ವಟವೃಕ್ಷದಲ್ಲಿ ಅನೇಕ ಕಲ್ಪ ಆಯುಷ್ಯ ತನ್ನ ತಪೋಬಲ ದಿಂದ ಪಡೆದು ಅನೇಕ ಸೃಷ್ಟಿಗಳನ್ನು ನೋಡಿದ ಋಷಿಯು ಹೇಳುವಂತೆ ಈ 10 ಅವತಾರಗಳು ಅನೇಕ ಸಾರಿ ಇದೇ ಕ್ರಮಾನ್ವಯದ ಪೋಣಿಕೆ ಯಲ್ಲಿ ತಾನು ನೋಡಿದ್ದೇನೆಂತಲೂ ಅನೇಕ ವಸಿಷ್ಠರು ಅನೇಕ ರಾಮ ದೇವರಿಗೆ ಜ್ಞಾನಬೋಧಮಾಡಲಿಕ್ಕೆಹೋಗುವದು ತಾನು ಕಂಡಿದ್ದೇ ನೆಂತ ವಸಿಷ್ಠನಿಗೆ ಹೇಳಿದ ವಾಕ್ಯದಿಂದ ಈ 10 ಅವತಾರಗಳು ಆತ್ಮನು ಒಂದು ಜೀವದಶೆಯಲ್ಲಿ ತಾಯಿಯ ಗರ್ಭದಲ್ಲಿ ಪ್ರವೇಶವಾಗಿ ಜೀವನ್ಮುಕ್ತ ನಾಗಿ ಬ್ರಹ್ಮಸ್ವರೂಪದಲ್ಲಿ ಲೀನನಾಗುವ ವರೆಗಿನ ಆತನ 10 (stages) ವೇದಿಕೆಯ ಮಜಲುಗಳು ಎನ್ನಲೂಬಹುದು. ಅಥವಾ (3) ಇವು 10 ಅವತಾರಗಳು ನಮ್ಮ ದೇಹದಲ್ಲಿಯ ತತ್ತ್ವಗಳು ಹ್ಯಾಗೆ ಅವತಾರಕೃತ್ಯ ಗಳಂತೆಯೇ ಯೋಗಾಭ್ಯಾಸಕ್ಕೆ ಅನುಕೂಲವಾಗಿ ವರ್ತಿಸುತ್ತವೆ ಎಂತ ಸಹಾ ಗ್ರಹಿಸಬಹುದು. ಇದೆಲ್ಲಾ ಆಯಾಯ ಮೇಧಾಶಕ್ತಿ ಪ್ರಕಾರ ಗ್ರಹಿಸಬಹುದಾದ ಊಹನೆಗಳು.

ಈ ಮೇಲಿನ ಸ್ತೋತ್ರದಲ್ಲಿ ತೋರುವ ಪ್ರಥಮ ಚರಣದಲ್ಲಿ ತೋರುವ:—

## 1. ಮತ್ಸ್ಯಾವತಾರ

ಈ ಪ್ರಥಮ ಅವತಾರದ ಕುರಿತು ಪುರಾಣದ ಕಥೆ ಏನೆಂದರೆ ಸತ್ಯ ಲೋಕದಲ್ಲಿದ್ದ ಬ್ರಹ್ಮನ ವೇದಗಳನ್ನು ಶಂಖಾಸುರನೆಂಬ ದೈತ್ಯನು ಕಳವು ಮಾಡಿ ಸಾಗರಕ್ಕೆ ಪ್ರವೇಶಸಾದನು. ಬ್ರಹ್ಮನು ವಿಷ್ಣುವಿಗೆ ಮೊರೆಯಿಡಲು

ಆತನು ಮತ್ಸ್ಯಾವತಾರ ತಾಳಿ ಶಂಖಾಸುರನನ್ನು ಸಂಹರಿಸಿ, ಆತನ ಹೊಟ್ಟೆಯಲ್ಲಿದ್ದ ವೇದಗಳನ್ನು ಬ್ರಹ್ಮನಿಗೆ ತಂದುಕೊಟ್ಟನು. ಶಂಖಾಸುರನು ತನ್ನ ಸಂಹಾರಕಾಲದಲ್ಲಿ "ನನ್ನ ಕಳೇವರವು ನಿನಗೆ ಪವಿತ್ರವಾಗಬೇಕು. ಮತ್ತು ಆ ಶಂಖದ ನೀರು ಪ್ರೋಕ್ಷಣೆ ಮಾಡಿದ ವಸ್ತುಗಳು ಮಾತ್ರ ಪವಿತ್ರವಾಗಿ ನೀನು ಅಂಗೀಕರಿಸಬೇಕು. ಮತ್ತು ನಿನ್ನ ತಲೆಯ ಮೇಲೆ ಸಹಾ ಶಂಖದ ನೀರು ಹಾಕಿಯೇ ನೀನು ಪವಿತ್ರತೆಗೆ ಬರಬೇಕೆಂದು ಬೇಸಗೊಳ್ಳಲು, ಅದಕ್ಕೆ ವಿಷ್ಣು ಒಪ್ಪಿ, ಈಗ ತುಳಸಿ ಮೊದಲಾದ ಪೂಜಾ ಸಾಮಗ್ರಿ, ಪೂಜಾಸ್ಥಾನ, ಪೂಜೆಯ ಮೂರ್ತಿ—ಎಲ್ಲಾ ಶಂಖದ ನೀರು ಪ್ರೋಕ್ಷಿಸಿ ವಿಷ್ಣುವಿಗೆ ಅರ್ಪಣೆಮಾಡುವ ಪೂಜೆ ಕ್ರಮ ಉಂಟು. ಈ ಕಥೆಯನ್ನು ಅರ್ಥಮಾಡಿ ನಂಬಲಿಕ್ಕೆ ಸಾಧಾರಣ ಜನರ ಮೇಧಾಶಕ್ತಿ ಸಾಲದು. ಯಾಕಂದರೆ ವೇದಕ್ಕೆ ಶ್ರುತಿ ಅನ್ನುತ್ತಾರೆ. ಅದು ಬ್ರಹ್ಮನು ಬರೆದಿಟ್ಟ ಬೂಕುಗಳಲ್ಲ. ವೇದ ಎಂಬ ಶಬ್ದ "ವಿದ್" ಅಂದರೆ ತಿಳಕೊ ಎಂಬ ಅರ್ಥ. ವೇದ ಅಂದರೆ ತಿಳುವಳಿಕೆ, ಜ್ಞಾನ. ಅದು ಬ್ರಹ್ಮನು ಆತನ ಮಾನಸಪುತ್ರರಾದ ಋಷಿಗಳಿಗೆ ಹೇಳಿದನು. ಅವರು ಅದನ್ನು ಕೇಳಿದರು. ಆದ್ದರಿಂದ ಅದಕ್ಕೆ ಶ್ರುತಿ ಎಂದು ಹೆಸರು. ಆ ಋಷಿಗಳು ತಮ್ಮ ಅನುಯಾಯಿಗಳಿಗೆ ಹಾಗೆಯೇ ಹೇಳಿದರು. ಇವರೆಲ್ಲಾ ಏಕಪಾಠಿಗಳಾದ್ದರಿಂದ ಆ ವೇದ ನೆನಪಿಟ್ಟುಕೊಂಡಿರುತ್ತಿದ್ದರು. ಆ ಬ್ರಹ್ಮಜ್ಞಾನವನ್ನು ಶಂಖಾಸುರನು ಕದಿಯುವದು ಹ್ಯಾಗೆ, ಹೊಟ್ಟೆಯಲ್ಲಿಡುವದು ಹ್ಯಾಗೆ, ಅದನ್ನು ಹೊಟ್ಟೆ ಬಗೆದು ತೆಗೆದು ಬ್ರಹ್ಮನಿಗಾಗಿ ವಿಷ್ಣು ಮತ್ಸ್ಯಾವತಾರ ತಾಳಿ ಸಮುದ್ರಕ್ಕೆ ಧುಮುಕಿ ತೆಗೆಯುವದು ಹ್ಯಾಗೆ?

ಮತ್ಸ್ಯಾವತಾರವು ಬ್ರಹ್ಮಾಂಡದಲ್ಲಿ ಮೀನಾಗಿ ಹುಟ್ಟಿದನು. ಹಾಗೆಯೇ ಮನುಷ್ಯನ ಶರೀರದಲ್ಲಿ (ಪಿಂಡಾಂಡದಲ್ಲಿ) (Semen) ಬಿಂದು ಉಂಟು. (microscope) ಸೂಕ್ಷ್ಮದರ್ಶಕದಿಂದ ನೋಡಿದರೆ ಮೀನಿನ ಮತ್ತು ಬಿಂದುವಿನ ಆಕಾರ ಒಂದೇ. ಒಂದು ಗುಂಡುಸೂಜಿಯ ಹಾಗೆ ಒಂದು ಚುಕ್ಕಿ ಮತ್ತು ಅದಕ್ಕೆ ಒಂದು ಬಾಲದಂತೆ ಒಂದು ರೇಖೆ ತೋರುತ್ತವೆ. ಆ ಚುಕ್ಕಿ ತಲೆಯಾಗಿಯೂ, ಬಾಲ ಶರೀರವಾಗಿಯೂ ಗರ್ಭದಲ್ಲಿ ವೀರ್ಯದ ಮುಖಾಂತರ ಪ್ರವೇಶಿಸಿ ಆ ಗರ್ಭ ಬೆಳೆಯುತ್ತದೆ. ಸಾಗರದಲ್ಲಿ

ಪ್ರವೇಶಿಸಿದ ವಿಷ್ಣುವು ತನ್ನ ಮತ್ಸ್ಯದೇಹವನ್ನು ಅತೀ ದೊಡ್ಡದಾಗಿ ಬೆಳಸಿ ಶಂಖಾಸುರನಿಗೆ ಸಂಹರಿಸಿದಂತೆಯೇ ನಮ್ಮ ಪುರುಷದೇಹದಲ್ಲಿ ಜನಿಸುವ ಬಿಂದುವನ್ನು ಹೊರಗೆ ಬಿಡದೆ ರಕ್ತದಲ್ಲಿಯೇ ಹೀರಿಕೊಂಡರೆ ಅದು ನಮ್ಮ ಹುಬ್ಬುಗಳ ಸಡುವೆ ಇರುವ ಆಜ್ಞಾಚಕ್ರ ಯಾ ಆಗ್ನೇಯ ಚಕ್ರದಲ್ಲಿ ಮೇಧಾ ಅಂಶವಾಗಿ ಬೆಳೆದು, ಅದಕ್ಕೆ—

1. ಮೂರ್ಧ್ನಿಜ್ಯೋತಿ.
2. ಅಮೃತಸ್ಥಾನ.
3. ಭ್ರೂಚಕ್ರ.
4. ಲಲಾಟನೇತ್ರ.
5. ದೇವಾಕ್ಷ್ಯ.
6. ತೃತೀಯನೇತ್ರ.
7. ಫಾಲನೇತ್ರ.
8. ಜ್ಞಾನಚಕ್ಷು.
9. ದಿವ್ಯದೃಷ್ಟಿ, ಮತ್ತು
10. ದಿವ್ಯಚಕ್ಷು.
11. Pineal gland.
12. ಆಗ್ನೇಯ ಯಾ ಆಜ್ಞಾಚಕ್ರ.

ಎಂಬ ಹೆಸರುಗಳುಂಟು. —ಚಂದ್ರಕಾಂತ.

ನಮ್ಮ ಬಿಂದು ದಿವ್ಯ ಚಕ್ಷು ಆಗಿ ಬೆಳದಲ್ಲಿ ಅದರ ಸಾಮರ್ಥ್ಯದಿಂದ ಶಂಕಾ ಯಾ ಆಶಂಕಾ ಯಾ ಸಂಶಯ, ಸಂಕಲ್ಪ ವಿಕಲ್ಪಗಳೆಲ್ಲಾ ನಾಶವಾದಿ ಮನಸ್ಸು ನಿರ್ವಿಕಲ್ಪ, ನಿಸ್ಸಂಶಯವಾಗಿ, ನಿಸ್ಸಂದೇಹವಾಗುತ್ತದೆ.

**189.** ನಿರ್ವಿಕಲ್ಪ ನಿಸ್ಸಂದೇಹೊ ಸರ್ವಭೂತಿಂ ಭಗವದ್ಭಾವೊ ಹಾ
ಭಕ್ತಿಚಾ ನಿಜನಿರ್ವಾಹೊ । ಭಜನ ಭಾವೊಯಾನಾವ ॥

ಎಂದು ಏಕನಾಥನು ಹೇಳುವಂತೆ ನಮ್ಮನ್ನು ಅಧೋಗತಿಗೆ ಸೆಳೆಯುವ ಸಂಶಯ ಎಂಬ ಅಸುರನನ್ನು ಸಂಹರಿಸಿ, ಭಗವದ್ಭಾವ ಹೃದಯದಲ್ಲಿ ಅಂಕುರಿಸಿ, ಭಕ್ತಿಯ ಸ್ವರೂಪವಾದ ಪ್ರೇಮಪ್ರಾಪ್ತಿಯಿಂದ ಬ್ರಹ್ಮಸ್ವರೂಪದಲ್ಲಿ ಲೀನವಾಗಬಹುದು.

ಹಾಗೆ ನಮ್ಮ ಪುರಾಣದ ಶಂಖಾಸುರನು ಶಂಖನಲ್ಲ. ಶಂಕಾಸುರ ಅಂದರೆ ಶಂಕಾ; ಅಂದರೆ ಆಶಂಕಾ ಸಂಶಯ, ಅಸುರ ಎಂಬ ಶಬ್ದದ ಅರ್ಥ ಏನೆಂದರೆ—**ಅಸು** ಅಂದರೆ ಇಂದ್ರಿಯ, **ರ** ಅಂದರೆ ರಮಮಾಣನಾಗುವುದು. ಅಸುರ ಅಂದರೆ ಇಂದ್ರಿಯಗಳ ಮುಖಾಂತರ ವಿಷಯಗಳನ್ನು ಗ್ರಹಣಮಾಡಿ ವಿಷಯಲಂಪಟನಾಗುವದೇ ಅಸುರ ಯಾ ಆಸುರೀ ಸಂಪತ್ತಿಯ ಲಕ್ಷಣ. ಮನಸ್ಸು ನಿಸ್ಸಂಶಯ ಆದರೆ ಮಾತ್ರ ಶ್ರದ್ಧೆ ಉತ್ಪನ್ನವಾಗುತ್ತದೆ.

**190.** “ದೃಢ ಆಸ್ತಿಕ್ಯಂ ಸಮಾಧಾನ ಶುದ್ಧಶ್ರದ್ಧಾತೀ ಜಾಣ ॥” ಎಂತ ಏಕನಾಥರು ಹೇಳುತ್ತಾರೆ. ಆಸ್ತಿಕ್ಯ ಅಂದರೆ ದೇವರು ಸರ್ವ ಕಡೆಯಲ್ಲಿಯೂ ಇದ್ದಾನೆ. ಆತನಿಲ್ಲದ ಒಂದು ಮುಳ್ಳುಮೊನೆಯು ಕುಳ್ಳುವರೆಡೆ ಸಹಾ ಇಲ್ಲ. ಆತನು ಸರ್ವವ್ಯಾಪಿ, ಸರ್ವರೂಪಗಳೂ ಅವನದೇ. ಆತನು ಎಲ್ಲಾ ಮಾಡುವುದು, ಸುಖದುಃಖಗಳೆಲ್ಲಾ ಪ್ರಾಪ್ತಿಯಾಗುವುದು ಆತನಿಂದಲೇ. ಆತನು ಸಕಲವೂ ನಮ್ಮ ಒಳ್ಳೆಯದಕ್ಕೆ ಮಾಡುತ್ತಾನೆ—ಎಂದು ನಿಸ್ಸಂಶಯವಾಗಿ ಪೂರ್ಣ ಶ್ರದ್ಧೆಯಿಂದ ಮನಸ್ಸಿಗೆ ಶಾಂತಿ ಪ್ರಾಪ್ತಿಯಾಗಿ ಸಮಾಧಾನದಲ್ಲಿರುವುದೇ ಶ್ರದ್ಧಾ. ಶ್ರತ್=ಸತ್ಯ ಧಾ = ಧಾರಣೆಮಾಡುವುದು.

ಈ ಸಂಶಯ ಎಂಬ ಶಂಕಾಸುರನು ಅತಿ ಬಲಿಷ್ಟನು ಮತ್ತು ಎಂಥಾ ಪ್ರಖ್ಯಾತಿಯ ಜ್ಞಾನಿಯಾದರೂ ಮನಸ್ಸಿಗೆ ಸಂಶಯ ಬಂದ ಕೂಡಲೆ ಆತನ ಜ್ಞಾನ ಅಥವಾ ವೇದ ಈ ಶಂಕಾಸುರನು ಅಪಹಾರ ಮಾಡುತ್ತಾನೆ. ಮತ್ತು ಆ ಜ್ಞಾನಿಯು ಜ್ಞಾನ ಎಲ್ಲಾ ಕಳಕೊಂಡು ಪಾಂಡಿತ್ಯ ಮಾತ್ರ ಇದ್ದು ದೊಡ್ಡ ದಿಗ್ವಿಜಯಿ ಎಂತ ಲೋಕದಲ್ಲಿ ಮೆರೆದರೂ ಮುಕ್ತಿಗೆ ಅರ್ಹನಾಗುವುದಿಲ್ಲ.

ಹೀಗೆ ನಿಸ್ಸಂಶಯವಾದ ಮನಸ್ಸಿನ ಪವಿತ್ರವಾದ ಶ್ರದ್ಧಾಯುಕ್ತ ಭಕ್ತಿಯ ವೃತ್ತಿಗಳು ಶಂಖದ ನೀರಿನಂತೆ ಶಂಖದೊಳಗಿದ್ದ ಜೀವನಾದ ಶಂಖಾಸುರನಿಗೆ ಕೊಂದ ನಂತರ ಆ ಶಂಖದ ನೀರು ಹ್ಯಾಗೆ ವಿಷ್ಣುವಿಗೆ ಪವಿತ್ರವೋ ಹಾಗೆಯೇ ನಿಸ್ಸಂಶಯ ಮನಸ್ಸಿನ ಭಕ್ತಿ ಪ್ರೇಮದ ವೃತ್ತಿ

ಗಳು ಪವಿತ್ರವಾಗಿ ಸಾಧಕನು ಮುಕ್ತಿಪಡೆಯುತ್ತಾನೆ, ಶಾಂತಚಿತ್ತನಾಗಿರು ತ್ತಾನೆ. ಸಂಶಯ ಎಂಬ ಶಂಕಾಸುರನು ಜ್ಞಾನಿಗಳಿಗೂ, ಸಾಧಕರಿಗೂ, ಮುಮುಕ್ಷುಗಳಿಗೂ ಅವರ ಜ್ಞಾನ ಯಾ ವೇದಹರಣಮಾಡುತ್ತಾನೆ.

ನಮ್ಮ ಬಿಂದುವಿನ ಕುರಿತು ಸರ್ವಜ್ಞನ ಪದ ಏನೆಂದರೆ:—

**191.** "ಒಂದು ನಾಳದಿ ಬಿಂದುಮೂತ್ರವು । ಒಂದು ಬಿಟ್ಟು
ಮತ್ತೊಂದು ಬಿಡದವನೇತಾಂ ಯೋಗೀ ಸರ್ವಜ್ಞ ॥

ಅಂದರೆ ಶಿಶ್ನದಿಂದ ಮೂತ್ರ ಮಾತ್ರ ಹೊರಗೆ ಬಿಡಬೇಕು ಹೊರತು ಬಿಂದು (semen) ಹೊರಕ್ಕೆ ಬಿಡಬಾರದು. ಹಾಗೆ ಬಿಂದು ರಕ್ಷಣೆ ಮಾಡುವವನೇ ಯೋಗಿಯು. ಯಾಕೆಂದರೆ ಆ ಬಿಂದು ಜ್ಞಾನಚಕ್ಷು ಆಗಿ, ಜ್ಞಾನಾಗ್ನಿಯಿಂದ ಕಾಮನನ್ನು ತನ್ನ ಫಾಲನೇತ್ರದಿಂದ ಕಾಮ ಚಕ್ರೇಶ್ವರನನ್ನು ಈಶ್ವರನು ಸುಟ್ಟಂತೆ ಕಾಮದಹನಮಾಡಿ, ಮನುಷ್ಯನು ನಿಷ್ಕಾಮನಾಗಿ, ನಿರ್ವಿಕಲ್ಪಸಮಾಧಿಯಲ್ಲಿ ದೇಹ ಮತ್ತು ವಿಶ್ವ ಮರೆತು (god intoxicated) ರಾಮಅಮಲದಲ್ಲಿರಬಹುದು. ಬಿಂದುವು ಸ್ವಾಭಾವಿಕವಾಗಿ ಸಂತಾನ ಬೆಳೆಸುತ್ತದೆ. ಅದರಿಂದ ಪುತ್ರ, ಪುತ್ರಿಗಳಾಗು ತ್ತವೆ. ಆದರೆ ಅಮಲು ಆ ಬಿಂದುವಿನಿಂದ ಹುಟ್ಟಬೇಕಾದರೆ ಬ್ರಹ್ಮ ಚರ್ಯವ್ರತದಿಂದ ಅಮರೊಲಿ ವಜ್ರೋಲಿ ಮೊದಲಾದ ಸಾಧನೆಗಳಿಂದ ಬಿಂದು ಹೊರಗೆ ಬಿಡಬಾರದು. ರಕ್ಷಣೆಮಾಡಿ ಆಜ್ಞಾಚಕ್ರದಲ್ಲಿ ಮೇಧಾ ಆಗಬೇಕು.

ತೆಂಗಿನಮರದಿಂದ ಸ್ವಾಭಾವಿಕವಾಗಿ ತೆಂಗಿನಕಾಯಿಗಳು ಆಗು ತ್ತವೆ. ಆ ಮರದ ಕೊಂಬನ್ನು ಮುಕ್ತಿದಾರನಿಂದ ಕೊಯಿಸಿ ಅದರ ಸತ್ವವನ್ನು ಒಂದು ಮಡಕೆಯಲ್ಲಿ ಶೇಖರಿಸಿ ಆ ಶೇಂದಿಯನ್ನು ಕುಡಿದರೆ ಅಮಲು ಹತ್ತುತ್ತದೆ. ಹಾಗೆಯೇ ಯೋಗಸಾಧನೆಯಿಂದ ಬಿಂದು ಅಮೃತ ಸಿಂಧುಮಾಡಿ ಜನ್ಮಮರಣದಿಂದ ತಪ್ಪಬಹುದು. ಇದೇ ಮತ್ಸ್ಯದ ಹಾಗಿ ರುವ ಬಿಂದು ಮತ್ಸ್ಯಾವತಾರವಾಗಿ ಬೆಳೆದು ಶಂಖಾಸುರನಿಗೆ ಸಂಹರಿಸಿ ಬ್ರಹ್ಮನ ವೇದ ಆತನೆ ತಂದುಕೊಡುವದೆಂಬುದರ ಅರ್ಥ.

ಈ ಶಂಕಾಸುರನ ಪರಾಕ್ರಮದ ಕುರಿತು ಕೆಲವು ದೃಷ್ಟಾಂತಗಳು:—

1. ನಾಲ್ಕು ವಿಧವೆಯರು ಒಬ್ಬಗುರುವಿನಿಂದ ಬೀಜಾಕ್ಷರ ಜಪದ ಉಪದೇಶ ಪಡೆದು, ಮಂತ್ರವನ್ನು ಬಹು ಗೋಪ್ಯದಲ್ಲಿಟ್ಟು, ಒಂದು ದೊಡ್ಡ ಕೆರೆಯ 4 ಮೂಲೆಯಲ್ಲಿ ನಾಲ್ವರೂ ಕುಳಿತು ಏಕಾಗ್ರತೆಯಿಂದ ಬಹುಕಾಲ ಸಾಧನೆಮಾಡಲು, ಸ್ವರ್ಗದಿಂದ ವಿಮಾನ ಬಂತು. ಅದರಲ್ಲಿ ನಾಲ್ವರೂ ಕುಳಿತು, ಸ್ವರ್ಗಕ್ಕೆ ವಿಮಾನ ಮೇಲೆ ಏರುವಾಗ, ಅವರಿಗೆ ಕೊಟ್ಟ ಜಪ ಇನ್ನೂ ಗುಟ್ಟಿನಲ್ಲಿಡುವದು ಏನು ಅಗತ್ಯ ಎಂದು ಪರಸ್ಪರ ತಿಳಕೊಂಡಲ್ಲಿ ಆ ನಾಲ್ಕು ಅಕ್ಷರಗಳು ಬೋ, ಳೀ, ಮುಂ, ಡೆ ಎಂದು ತಿಳಿಯಲು, ಒಟ್ಟುಕೂಡಿಸಿದರೆ ಬೋಳೀಮುಂಡೆ ಎಂತ ಆಗುತ್ತದೆ. "ನೋಡಿದಿರಾ, ನಮ್ಮ ಗುರು ನಾವು ಅಜ್ಞಾನಿ ಹಳ್ಳಿಹೆಡ್ಡರೆಂದು ಈ ಅಬದ್ಧ ಮಂತ್ರ ಕೊಟ್ಟನಲ್ಲವೇ ಎಂದು ಗುರುವನ್ನು ಧಿಕ್ಕರಿಸಲು, ವಿಮಾನ ಕೆಳಕ್ಕೆ ಬಿದ್ದು ಆ ನಾಲ್ಕು ವಿಧವೆಯರು ಜಖಂಪಟ್ಟು ಆಸ್ಪತ್ರೆಯಲ್ಲಿದ್ದರಂತೆ. ಈ ದುರ್ದಶೆ ಶಂಕಾಸುರನಿಂದ ಅವರಿಗೆ ಬಂತು.

2. ಒಬ್ಬ ಬ್ರಾಹ್ಮಣನು ಒಂದು ಆಡನ್ನು ಹೆಗಲ ಮೇಲೆ ಹಾಕಿ ಮನೆಗೆ ಹೋಗುತ್ತಿದ್ದನು. ಆಗ ಕೆಲವು ಕಾಕುಪೋಕರು ಮಸ್ಲತು ಮಾಡಿ ಆತನ ಮಾರ್ಗದಲ್ಲಿ ಪ್ರತ್ಯಪ್ರತ್ಯೇಕ ಸ್ಥಳದಲ್ಲಿ ಒಳಮಾರ್ಗದಿಂದ ಹೋಗಿ ಆತನು ಬರುತ್ತಾ, ಅವರ ಪೈಕಿ ಪ್ರಥಮನು "ಅಯ್ಯಾ ಬ್ರಾಹ್ಮಣನೇ, ನಿನ್ನ ಹಣೆಬರಹವೇ, ನಾಯಿಯನ್ನು ಹೊತ್ತುಕೊಂಡುಹೋಗುತ್ತೀಯಲ್ಲಾ" ಎಂದನು. ಆ ಬ್ರಾಹ್ಮಣನು ಅದನ್ನು ಲಕ್ಷ್ಯಮಾಡದೆ ಮುಂದರಿಸಿದನು. ಹಾಗೆ ಮುಂದೆ ಹೋಗುತ್ತಾ ದ್ವಿತೀಯನು "ಆಹಾ ಕಲಿಯುಗವೇ—ಬ್ರಾಹ್ಮಣನು ನಾಯಿಯನ್ನು ತಲೆಮೇಲೆ ಹೊರುತ್ತಾನಲ್ಲಾ" ಎಂದು ಕೇಕೆಹಾಕಿ ನಕ್ಕನು. ಅದು ಕೇಳಿ ಬ್ರಾಹ್ಮಣನಿಗೆ ಅಲ್ಪಸ್ವಲ್ಪ ಸಂಶಯವಾಯಿತು. ಮೂರನೆಯವನು "ಅತಿವೃಷ್ಟಿ, ಅನಾವೃಷ್ಟಿಗೆ ಕಾರಣ ಈ ಬ್ರಾಹ್ಮಣರೇ. ನಾವೆಲ್ಲಾ ತುರುಕರು, ಅಜ್ಞಾನಿಗಳು. ಆದರೂ ನಾವು ನಾಯಿಗೆ ಮುಟ್ಟುವುದಿಲ್ಲ. ಈ ಪವಿತ್ರ ಬ್ರಾಹ್ಮಣನು ಅಂಥಾ ನಾಯಿಯನ್ನು ತಲೆಮೇಲೆ ಹೊರುತ್ತಾನಲ್ಲಾ" ಅಂದನು. ಆಗ ಆ ಬ್ರಾಹ್ಮಣನು ಈ ಮಧ್ಯಾಹ್ನ ಹೊತ್ತಿಗೆ ಆ ಗುಳಿಗನ ಕಟ್ಟೆ ಹತ್ತಿರದಿಂದ ಬಂದ ದೋಷದಿಂದ ನನಗೆ ಬುದ್ಧಿ ಭ್ರಮಣ ಆಗಿ ಆಡು ಎಂತ ನಾನು ನಾಯಿಗೆ ತಂದೆನೋ ಏನೋ

ಎಂತೆ ಸಂಶಯ ತೋರಿತು. ಮುಂದುವರಿದು ಹೋಗುವಾಗ, ನಾಲ್ಕನೆ ಯುವನು “ಇಗೋ ಬ್ರಾಹ್ಮಣಾ, ಈಗ ನೀನು ಊರಿನಲ್ಲಿ ಪ್ರವೇಶಮಾಡುತ್ತಿ, ಅಲ್ಲಿ ಅನೇಕ ಹುಡುಗರೂ ಕಾಕುಪೋಕರೂ ಇದ್ದಾರೆ. ನೀನು ನಾಯಿ ಹೊತ್ತುಕೊಂಡು ಹೋದರೆ ನಿನಗೆ ಕಲ್ಲಿನಿಂದ ಹೊಡೆದಾರು, ಜಾಗ್ರತೆ ಇರಲಿ” ಅಂದನು. ಆಗ ತಾನು ಹೊತ್ತುಕೊಂಡು ಹೋಗುವದು ನಾಯಿಯೇ ಎಂದು ನಿಶ್ಚಯವಾಗಿ ಅದನ್ನು ಹೊತ್ತುಹಾಕಿ ಬರೀ ಕೈಯಿಂದ ಆತನು ಮನೆಗೆ ಹೋದನು. ನಂತರ ಈ ನಾಲ್ವರೂ ಆಡನ್ನು ತಿಂದುಹಾಕಿದರು.

3. ರಾಮಕೃಷ್ಣ ಪರಮಹಂಸರು ಹೇಳುತ್ತಾರೆ:—ಒಬ್ಬನು ಬಾವಿ ಸುಮಾರು 2 ಮುಂಡು ತೋಡುವಾಗ ಆತನ ಸ್ನೇಹಿತನೊಬ್ಬನು ಬಂದು “ಇಲ್ಲಿ ನೀರಿಲ್ಲ. ಇಲ್ಲಿಂದ 60 ಮಾರು ದೂರ ಅಗಿ” ಎನಲು, 2ನೇ ಸ್ಥಳದಲ್ಲಿ ಅಗಿಯಲಿಕ್ಕೆ ಶುರುಮಾಡಿದನು. ಇನ್ನೊಬ್ಬ ಸ್ನೇಹಿತನು “ನಿನಗೆ ಇಲ್ಲಿ ನೀರುಂಟೆಂದು ಯಾರು ಹೇಳಿದರು? ಎಂದು ಕೇಳಲು, “(water-diviner) ನೀರಿನ ಜ್ಞಾನ ಉಳ್ಳವನು” ಎನಲು, “ಅವರು ಬರೀ ಢೋಂಗಿ. ನಿನಗೆ ಹುಚ್ಚೋ? ಇಲ್ಲಿ ನೀರಿಲ್ಲ. ಇಲ್ಲಿಂದ ½ ಫರ್ಲಾಂಗ್ ಪೂರ್ವಕ್ಕೆ ಅಗಿ” ಎನಲು, ಅಗಿಯುವದು ಬಿಟ್ಟು ಬೇಜಾರದಿಂದ ಮನೆಗೆ ಹೋದನು. ನೀರು ಎಲ್ಲಾ ಕಡೆಯಲ್ಲಿ ಉಂಟು. ಸಿಕ್ಕುವವರೆಗೆ ಒಂದೇ ಸ್ಥಳದಲ್ಲಿ ನಿಸ್ಸಂಶಯ ಮನಸ್ಸಿನಿಂದ ಅಗಿಯದೆ ಹಾಳಾದನು.

4. ಒಬ್ಬ ಆಫೀಸರನು ಮುಂಜಾನೆ ಎದ್ದು ತನ್ನ ಕೃತ್ರಿಮ ಹಲ್ಲಿನ ಜತೆಯ ಜೋಡು ಎಂದಿನಂತೆ ಮಲಗುವಾಗ ರಾತ್ರಿ ಬಾಯಿಯಿಂದ ತೆಗೆದು ಇಟ್ಟಿದ್ದನ್ನು ಹುಡುಕಲು, ಸಿಕ್ಕದೆ ತಾನು ಬಾಯಿಯಿಂದ ತೆಗೆಯಲಿಕ್ಕೆ ಮರೆತು ಬಹುಶಃ ರಾತ್ರೆ ನಿದ್ರೆಯಲ್ಲಿ ನುಂಗಿಬಿಟ್ಟೆ ಎಂದು ಅನುಮಾನದಿಂದ ಹೊಟ್ಟೆ ಗಿವಚಲಿಕ್ಕೆ ಶುರುಮಾಡಿದ. ತನ್ನ ಹೊಟ್ಟೆಯ ಒಳಗಿನ ಅಂತರಾಚ್ಛಾದನ ತ್ವಚೆ ಹಲ್ಲುಗಳು ತಾಗಿ ಹರಿದುಹೋಗಿಯದೆ ಎಂತಲೂ ಭ್ರಾಂತಿಪಟ್ಟು ಒಪರೇಶನ್ ಮಾಡಿ ಹೊಟ್ಟೆ ಸಿಗಿದುತೆಗೆಯು

ಬೇಕೆಂದು ಆಸ್ಪತ್ರೆಯಲ್ಲಿ ಹಟಹಿಡಿದು ಕಂಗಾಲಾಗಿ ಅತೀ ಕ್ಷೀಣನಾಗಿ ಮಲಗಿದ್ದಲ್ಲಿ ಒಪರೇಶನ್ ತಯಾರಿ ಡಾಕ್ಟರರು ಮಾಡುವಾಗ ಆತನ ಹೆಂಡತಿಯ ಟಿಲಿಗ್ರಾಮು "ಹಲ್ಲುಜತೆ ಹಾಸಿಗೆ ಅಡಿಯಲ್ಲಿ ಇದ್ದುದು ಸಿಕ್ಕಿತೆಂದು ಬಂದ ಕೂಡಲೇ ಆತನು ಹುಶಾರಾಗಿ ಕೂಡಲೇ 18 ಮೈಲು ಪ್ರಯಾಣಮಾಡಿ ಆಸ್ಪತ್ರೆಯಿಂದ ತನ್ನ ಮನೆಗೆ ಹೋದನೆಂದು ಒಮ್ಮೆ ಪೇಪರಿನಲ್ಲಿ ಬಂದಿತ್ತು.

5. (F. T. Brooks) ಎಫ್. ಟಿ. ಬ್ರೂಕ್ಸ್ ಎಂಬ ಒಬ್ಬ ಯುರೋಪಿಯನನು ಲಂಡನಿನಿಂದ ಅಡ್ಯಾರಿಗೆ (ಮದ್ರಾಸಿಗೆ) ಬಂದು ಥಿಯಾಸೊಫಿ ಸೊಸಾಯ್ಟಿಗೆ ಸೇರಿ ಭಗವದ್ಗೀತೆ ಕಲಿತು, ಪ್ರವಚನಕೊಡುವದು, ಸಂಸ್ಕೃತ ಕಲಿತು ಇತರರಿಗೆ ಕಲಿಸುವದು–ಇದೆಲ್ಲಾ ಮಾಡಿ ಮೆರೆದನು. ಸ್ವಲ್ಪ ಕಾಲದಲ್ಲಿ ಮುಸ್ಲಿಮ್ ಮತಕ್ಕೆ ಸೇರಿದನು. ಸಂಶಯಯುಕ್ತನಾಗಿ ಆರ್ಯಸಮಾಜಕ್ಕೆ ಸೇರಿದನು. ಅಲ್ಪ ಸಮಯದಲ್ಲಿಯೇ ಅಕಾಲ ಮರಣಪಟ್ಟನು.

6. ಈ ಮೇಲಿನ ದೃಷ್ಟಾಂತಗಳಲ್ಲಿ ಹ್ಯಾಗೆ ಸಂಶಯ ಹಾನಿ ಮಾಡಿತೋ, ಅದಕ್ಕೆ ಸರಿ ವಿರೋಧವಾಗಿ ವಿಶ್ವಾಸ ಹ್ಯಾಗೆ ಸಹಾಯಕ್ಕೆ ಬೀಳುತ್ತದೆಂಬುದಕ್ಕೆ ವಿಲಾಯತಿಯ ಡಾಕ್ಟರ್ ಫುಟ್ (Dr. foot of London) ತನ್ನ ಅನುಭವ ಹೇಳುತ್ತಾರೆ:—ಒಬ್ಬ ಕೃಶನಾದ ಉದ್ದ (Irishman) ಆಯರ್ಲೆಂಡಿನವನು ಆ ಡಾಕ್ಟರರು ತನ್ನ ಕುದುರೆಗಾಡಿಯಲ್ಲಿ ಹೋಗುವಾಗ ಗಾಡಿ ನಿಲ್ಲಿಸಿ, "ನನ್ನ ಕ್ಷಯರೋಗಕ್ಕೇನಾದರೂ ಔಷದಿ ಹೇಳಬೇಕೆನಲು, "Take Cod-liver oil" ಅಂದರೆ ಕೋಡ್ಲಿವರ್ ಮೀನಿನ ಎಣ್ಣೆ ತೆಗೆದುಕೊ ಎಂದು ಹೇಳಿ ಮುಂದರಿಸಿದನು. 2 ವರ್ಷ ನಂತರ ಒಬ್ಬ ಉದ್ದಧಾಂಡಿಗ ಆಳು ಅವರ ಗಾಡಿ ನಿಲ್ಲಿಸಿ, "ನನಗೆ ನೀನು ಹೇಳಿದ ಮದ್ದಿನಿಂದ ಕ್ಷಯರೋಗ ಗುಣ ಆಯಿತೆಂದನು." "ನಾನು ಯಾವ ಔಷಧಿ ನಿನಗೆ ಹೇಳಿದ್ದು?" ಎನಲು, "Dog-liver oil" "ಅಂದರೆ ನಾಯಿಯ ಕಲಿಜೆಯ ಎಣ್ಣೆ" ಎನಲು, ಆ ಡಾಕ್ಟರರಿಗೆ ಆಶ್ಚರ್ಯ ಆಯಿತು. ಈ ರೋಗಿಗೆ ವಿಶ್ವಾಸವೇ ಫಲದಾಯಕ ಆಯಿತು. ನಿಸ್ಸಂ

ಶಯ ಮನಸ್ಸಿನಿಂದ ಆತನು ಸಿಕ್ಕಿದ ನಾಯಿಗೆ ಕೊಂದು ಅದರ ಕಲಿಜಿಯ (heart) ಎಣ್ಣೆ ತೆಗೆದು ಕುಡಿದು ಕ್ಷಯರೋಗ ಕಳಕೊಂಡನು.

## 2. ಕೂರ್ಮಾವತಾರ

ಕೂರ್ಮ ಪುರಾಣದಲ್ಲಿ ಕೂರ್ಮಾವತಾರ ಚರಿತ್ರೆ ಏನೆಂದರೆ, ಕ್ಷೀರ ಸಾಗರ ಮಥನ ಸಮಯ ವಿಷ್ಣುವು ಕೂರ್ಮಾವತಾರ ಧರಿಸಿ ಕ್ಷೀರ ಸಾಗರದಲ್ಲಿ ಮಥನಮಾಡುವ ಸುರಾಸುರರಿಗೆ ನಿಲ್ಲುವದಕ್ಕೆ ಆಶ್ರಯ ವಾಗಿಯೂ, ಮಂಥನಮಾಡುವ ರವಿಯಾದ ಮಂದಾರ ಪರ್ವತ ಬೆನ್ನಿನ ಮೇಲೆ ಹೊರುವದಕ್ಕೂ, ಕೂರ್ಮಾವತಾರನಾಗಿ ಸಹಾಯಮಾಡಿದನು. ಇದು ಬ್ರಹ್ಮಾಂಡದಲ್ಲಿ. ಇದೇ ಕೂರ್ಮ ನಮ್ಮ ದೇಹಪಿಂಡಾಂಡದಲ್ಲಿ ಹ್ಯಾಗೆ ಕೂರ್ಮಾವತಾರದಂತೆ ಸಮುದ್ರಮಥನಕ್ಕೆ ಸಹಾಯಮಾಡುತ್ತದೆ? ಆ ಮಥನ ಎಂಥಾದ್ದು ಮತ್ತು ಹ್ಯಾಗೆ? ಎಂದು ವಿಚಾರಿಸಲು,

1. ಭರತವರ್ಷದ ಚರಿತ್ರೆಯಲ್ಲಿ ವಿಷ್ಣು ಲಕ್ಷ್ಮಿಗೆ ಹೇಳುತ್ತಾನೆ:— ಕ್ಷೀರಸಾಗರದಲ್ಲಿ ಯೋಗನಿದ್ರೆ ಅಂದರೆ ತತ್ತ್ವಜ್ಞಾನದ ವಿಚಾರದಿಂದ ತನ್ನ ಅಂತರದೃಷ್ಟಿಯ ಸುಖಾನುಭವ ಎಂತಲೂ, ತನ್ನ ಶರೀರ ಮತ್ತು ಪರೀರ ಸಂಬಂಧಗಳೆಲ್ಲಾ ಮಾಯಾಕೃತ ಎಂತಲೂ, ನಿಜಾತ್ಮನು ಇದಕ್ಕೆಲ್ಲಾ ಅತೀತನೆಂತಲೂ, ಈ ಕ್ಷೀರಸಾಗರದಲ್ಲಿ ಶೇಷಶಯನ ಆಕಾರ ಸೃಷ್ಟಿ ಸ್ಥಿತಿಲಯಕ್ಕೋಸ್ಕರ ತಾನು ಧರಿಸಿದ್ದೆಂತಲೂ, ವೇದಶಾಸ್ತ್ರಗಳೆಂಬ ಸಾಗರ ಮಥನದಿಂದ ದೃಢ ಅಭ್ಯಾಸ ಮತ್ತು ಅಂತರ್ಲಕ್ಷ್ಯದಿಂದ ವೇದವ್ಯಾಸನು ಆ ಮಥನದ ಸಾರವಾಗಿ ಭಗವದ್ಗೀತೆ ರಚಿಸಿದನೆಂತಲೂ ಹೇಳಿದನೆಂದು ತೋರುತ್ತದೆ.

2. ಏಕನಾಥರು ಕ್ಷೀರಸಾಗರ ಮಥನದ ಅಂತರಾರ್ಥ ಹೀಗೆ ಹೇಳುತ್ತಾರೆ:—

i ಭಗವದ್ಭಕ್ತಿ ಸಾಗರ, ನಿಜಧೈರ್ಯಮಂದಾರ, ಗುರುವಾಕ್ಯ ಯುಕ್ತಿ ಸುರಾಸುರ, ಭಾವವಿಶ್ವಾಸವಾದಿಂ, ಬೋಧರವಿ ಮಂಥ, ಪ್ರತ್ಯಗಾವೃತ್ತಿ ಅಭ್ಯಾಸೆಂ ಮಂಥನಕರಿ.

ii ಅಹಂ ಜ್ಞಾತಾ ಹಳಾಹಳ ಉಠಿ, ತೆಂ ವಿವೇಕ ಶಿವೆಂ ಧರಿಲೆಂ ಕಂಠಿಂ, ಪುಡತಿ ಅಹಂ ನುಠಿ ಗಿಳಿಲೆಂತೈಸೆಂ.

iii ನಿರಭಿಮಾನೆ ಮಂಥುನಿ ಕಾಡಿಲೆಂ ಭಕ್ತಿ ಸಾರಾಮೃತ ನಿಜಬೋಧಾಚೆಂ ಪಾತ ನಿಜಾನುಭವಾನೆ ಆಸಾವೂನ ತೆಥೆಂ ಹೆಂ ಸಾರಾಮೃತ ಭರುನಿ ಕರವಿಲೆಂ ಪ್ರಾಶನ ಉದ್ಧವಾಸಿಂ ತೆಣೆ ಉದ್ಧವನಿವಾಲಾ.

3. ಶಿವಾಜಿಮಹಾರಾಜರ ಗುರು ರಾಮದಾಸರು ಹೇಳುತ್ತಾರೆ:–

i ಶಬ್ದಮಥನ ಶಬ್ದೆಂ ಕೆಲೆಂ, ಅರ್ಥನವನಿತ ಪ್ರಕಟಲೆಂ, ಮಥನ ಕರ್ತ್ಯಾಸಿ ಭಕ್ಷಿಲೆಂ ತೆಂ ನವನೀತೆಂ.

ii ಪ್ರಪಂಚ ತಕ್ರಾ ಅಂತರಿಂ ನವನೀತ ವಾಸ್ತವ್ಯಕರಿ, ತಕ್ರ ಆಟೂನಿ ಪಾತ್ರ ಭರಿ ನವನೀತಝಾಲೆಂ.

iii ಅವಘೆಂ ನವನೀತ ದಾಟಲೆಂ ತೆಣೆ ಬಳೆಂ ಪಾತ್ರ ಫುಟಲೆಂ ನವನೀತೆಂ ಸಂಪೂರ್ಣ ಝಾಲೆಂ ಬ್ರಹ್ಮಾಂಡ ಅವಘೆಂ ॥

iv ತೆಥೆಂ ಹಿ ದಾಟಲೆಂ ಉದ್ದಂಡ ತೆಣೆ ಫುಟಲೆಂ ತೆಂಚಿ ತೆಂ ಝಾಲೆಂ.

v ನವನೀತ ಪ್ರಾಪ್ತವ್ಹಾವಯಾಸಿ ಜಾತಾಂ ತಯಾಸಿ ತೆಂಚಿ ಗ್ರಾಸಿಸಕಲ ಪದಾರ್ಥ ಮಾತ್ರಾಂಸಿ ನವನೀತ ಸೆವಿಲೆಂ ಆಪಣಾ ಅಪಣ ಹೀ ಅನುಭವಾಚಿ ಖೂಣ.

ದೃಶ್ಯ ವಿಷಯದ ಅವಸಾನ ಏನು? ಎಂತ ಅರವಿಂದ ಘೋಷರಿಗೆ ಕೇಳಲು, ಅವರು ಹೇಳಿದರು: "ಜೇನು ತನ್ನ ರುಚಿ ತಾನೇ ನೋಡುವಂತೆಯೂ, ಎಲ್ಲಾ ಜೇನು ಹನಿಗಳನ್ನು ತಾನು ಸೇವಿಸುವಂತೆಯೂ, ಹನಿಗಳೆಲ್ಲಾ ತಮ್ಮನ್ನು ತಾವೇ ನುಂಗುವಂತೆಯೂ, ಪ್ರತೀ ಒಂದು ಹನಿ ಇಡೀ ಜೇನುಗೂಡನ್ನು ನುಂಗುವಂತೆಯೂ ಅದೇ ಗತಿ ದೇವರಿಗೂ ಮನುಷ್ಯನ ಆತ್ಮನಿಗೂ ಇಡೀ ವಿಶ್ವಕ್ಕೂ."

ನಮ್ಮ ದೇಹದಲ್ಲಿ ಕೂರ್ಮನು ಏನು ಕೆಲಸಮಾಡುತ್ತಾನೆ? ಮಥನ ಅಂದರೇನು ಮತ್ತು ಮಥನ ವಿಧ ಹ್ಯಾಗೆ?

ಗರ್ಭದಲ್ಲಿ ಪ್ರವೇಶಿಸಿದ ಬಿಂದು ಬೆಳೆದು ಸಣ್ಣ ಅವಯವಗಳುದ್ಭವಿಸಿ ಕೂರ್ಮಾಕಾರವಾಗಿ ಆ ಗರ್ಭ ತೋರುತ್ತದೆ. ಈ ಕುರಿತು ವೇದಾಂತ ವಿಧಿವಾಕ್ಯ ಏನೆಂದರೆ:—

> "ವೇದಾಂತ ಶ್ರವಣಂ ಕುರ್ವನ್ ಯೋಗಂ ಸಮಾರಭೇತ್ ।
> ಆಕುಂಚನೇನ ಕುಂಡಲೀನ್ಯಾ ಕಪಾಟಮುದ್ಘಾಟ್ಯ ಮೋಕ್ಷ ದ್ವಾರಂ ವಿಭೇದಯೇತ್" ಕುಂಡಲಿನಿ ಯಾ ಸರ್ಪಿಣಿ ಮೂಲಾಧಾರ ಚಕ್ರದಲ್ಲಿ ನಿದ್ರಿಸ್ತನಾಗಿರುತ್ತದೆ. ಎಬ್ಬಿಸಿದರೆ ಕುಮಾರಿಯಾಗಿ ಸ್ವಾಧಿಷ್ಠಾನ ಚಕ್ರಕ್ಕೆ ಬರುತ್ತದೆ. ಯೊಷಿತಾ ಆಗಿ ಅನಾಹುತ ಚಕ್ರಕ್ಕೆ ಏರಿಬರುತ್ತದೆ ಮತ್ತು ಸಹಸ್ರಾರ ಚಕ್ರದಲ್ಲಿ ಪತಿವ್ರತಾ ಆಗಿ ನಿಲ್ಲುತ್ತಾಳೆ.
>
> —ತೈತಿರಿಯ ಉಪ 1-27-12.

ನಮ್ಮ ದೇಹದಲ್ಲಿ ಕೂರ್ಮ ಯಾವ ರೂಪದಲ್ಲಿ ಉಂಟು? ಕೂರ್ಮ ಒಂದು ಉಪವಾಯು. ಪಂಚ ಉಪವಾಯುಗಳು ಯಾವುವೆಂದರೆ ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ.

ಕೂರ್ಮವಾಯುವಿನ ವ್ಯಾಪ್ತಿಯು ಸ್ವಾಧಿಷ್ಠಾನದಿಂದ ಆಜ್ಞಾಚಕ್ರದ ವರೆಗೆ.

**192.** "ಕೂರ್ಮನಾಡಯಂ ಸ್ಥೈರ್ಯಂ" ಎಂತ ಪಾತಂಜಲಿ ಯೋಗ ಸೂತ್ರದ No. 31, 3ನೇ ಸೆಕ್ಷನಿನಲ್ಲಿ ಹೇಳಿಯದೆ. ಕೂರ್ಮ ಎಂಬ ಉಪವಾಯುವು ಕೂರ್ಮನಾಡಿ ಎಂಬ ನರದಲ್ಲಿರುತ್ತದೆ. ಇದರಲ್ಲಿ ಸಂಯಮ ಮಾಡಿದರೆ ಶರೀರಕ್ಕೆ ಸ್ಥೈರ್ಯ ಬಂದು ಅಚಲನಾಗಿರುತ್ತದೆ. ಹೀಗೆ **ಕೂರ್ಮಾವತಾರ** ಬ್ರಹ್ಮಾಂಡದಲ್ಲಿ; ನಮ್ಮ ಶರೀರ ಎಂಬ ಪಿಂಡಾಂಡದಲ್ಲಿ ಆ ಅವತಾರ ಕೂರ್ಮವಾಯುರೂಪದಲ್ಲಿರುತ್ತದೆ. ಕ್ಷೀರಸಾಗರ ಮಥನದಲ್ಲಿ ಉಪಯೋಗಿಸಿದ ಮಂಥನರವಿಯಾದ ಮಂದರಾಚಲಕ್ಕೆ ಸರಿ ಹೋಲಿಸಿ ನಮ್ಮ ಶರೀರದಲ್ಲಿ ಬೆನ್ನೆಲುಬು (Spinal Column)

ಮಥನಮಾಡುವ ಮಾದರಿ ಹಗ್ಗ ಬ್ರಹ್ಮಾಂಡದಲ್ಲಿ ವಾಸುಕಿ ಎಂಬ ಸರ್ಪ; ನಮ್ಮ ದೇಹದಲ್ಲಿ ಕುಂಡಲಿನಿ, ಯಾ ಸರ್ಪಿಣಿ ಎಂಬ ವಾಯು ರೂಪವಾಗಿ ಮೂಲಾಧಾರದಲ್ಲಿರುವ ಶಕ್ತಿ. ಮಥನಮಾಡುವ ಸುರರು ಮತ್ತು ಅಸುರರು ಬ್ರಹ್ಮಾಂಡದಲ್ಲಿ; ನಮ್ಮ ದೇಹ (ಪಿಂಡಾಂಡ)ದಲ್ಲಿ ಪ್ರಾಣ ಮತ್ತು ಅಪಾನ ಎಂಬ 2 ವಾಯುಗಳು. ಅಥವಾ ನಮ್ಮ ಹೃದಯದಲ್ಲಿರುವ ದೈವೀಸಂಪತ್ತಿ ಮತ್ತು ಆಸುರೀ ಸಂಪತ್ತಿ. ಬ್ರಹ್ಮಾಂಡದಲ್ಲಿ ಮಥನ ಮಾಡುವಾಗ ಸುರರು ವಾಸುಕಿಯ ಬಾಲಹಿಡಿದರು, ಅಸುರರು ಅದರ ಹೆಡೆಯ ಕಡೆಗೆ ಹಿಡಿದರು. (ಪಿಂಡಾಂಡ) ನಮ್ಮ ದೇಹದಲ್ಲಿ ಪ್ರಾಣಾ ಯಾಮದಿಂದ ಅಪಾನ ಮತ್ತು ಪ್ರಾಣ ವಾಯುಗಳನ್ನು ಸಂಲಗ್ನ ಅಂದರೆ ಒಟ್ಟುಕೂಡಿಸಬೇಕು. ಪೈಕಿ ಅಪಾನವಾಯುವು ಮೂಲಾಧಾರ ಚಕ್ರ (ಅಂದರೆ ಗುದ ಮತ್ತು ಲಿಂಗದ ನಡುವೆ)ದಲ್ಲಿದ್ದು ಅದರ ಗತಿಯು ಕೆಳಗೆ ಮೂತ್ರಪೂರಿಷ ದೇಹದಿಂದ ಹೊರಗೆ ನೂಕಿಬಿಡುತ್ತದೆ. ಪ್ರಾಣವಾಯು ವಿನ ಚಲನೆ ಊರ್ಧ್ವಕ್ಕೆ ಹೃದಯದಲ್ಲಿ ಅನಾಹತಚಕ್ರದಲ್ಲಿದ್ದು ಶ್ವಾಸ ನಿಶ್ವಾಸ ಅದರ ವೃತ್ತಿ. ಈ ಅಪಾನ ಮತ್ತು ಪ್ರಾಣದ ಸ್ವಾಭಾವಿಕ ಗತಿಯನ್ನು ಉಲುಟಮಾಡಿ ಅಪಾನ ಮೇಲೆಬರುವಂತೆಯೂ, ಪ್ರಾಣ ಕೆಳಗೆ ಹೋಗು ವಂತೆಯೂ ಪ್ರಾಣಾಯಾಮ ಅಭ್ಯಾಸಿಸಿದಲ್ಲಿ ಇವೆರಡು ಸ್ವಾಧಿಷ್ಠಾನ ಅಂದರೆ ಕುಕ್ಷಿ ಯಾನೆ ಕಿಬ್ಬೊಟ್ಟೆಯಲ್ಲಿ ಒಟ್ಟುಕೂಡಿದ ಕೂಡಲೇ ಕುಂಡ ಲಿನಿ ಶಕ್ತಿಯು ತಲೆ ಎತ್ತುತ್ತದೆ. ಆಗ್ಯೆ ಆ ಶಕ್ತಿ ಚಾಲು ಆಗುವ ನಾಡಿ ಗಳೂ ಷಟ್ಚಕ್ರಗಳೂ ನಿಶ್ಚೈತನ್ಯವಾಗಿರುವದರಿಂದ ಅದಕ್ಕೆ ಮುಂದುವರಿಸಿ ಹೋಗುವದಕ್ಕೆ ಮಾರ್ಗ ಇಲ್ಲದೆ ಇಡೀ ಶರೀರವು ನೆಲದಿಂದ ಕೂತಲ್ಲಿಂದ 2, 3 ಇಂಚು ಮೇಲಕ್ಕೆ ಎತ್ತಿ ಧೊಪ್ಪನೆ ಕೆಳಗೆ ಹಾಕಿದಂತೆ ಹಾರುತ್ತದೆ, ಆಗ್ಯೆ ನಮಗೆ (Shock) ಧಕ್ಕೆ ತಾಗುತ್ತದೆ. ಇದು ನಾಡಿ ಶುದ್ಧಿ ಆಗುವ ವರೆಗೆ ಸಾಧಾರಣ 1 ಯಾ $1\frac{1}{2}$ ತಿಂಗಳು ಹಾಗೆ ದೇಹ ಹಾರುತ್ತದೆ. ಕೆಲವು ಸಾರಿ ಕುರ್ಚಿಯಲ್ಲಿ ಕೂತ ನನಗೆ ಕುರ್ಚಿ ಸಮೇತ ಹಾಗೆ ನೆಲಕ್ಕೆ ಒಗೆದಂತೆ ಆಗಿ ಧಕ್ಕೆ ತಾಗಿತ್ತು. ನಮ್ಮ ಆತ್ಮಶಕ್ತಿ (Soul force) ಯ ಸ್ಥಾನ ಹುಬ್ಬುಗಳ ನಡುವೆ ಆಜ್ಞಾಚಕ್ರದಲ್ಲಿ. ಆ ಶಕ್ತಿಯು ಕಣ್ಣಿ ನಲ್ಲಿ ಬಂದಕೂಡಲೇ ನಾವು ಕಣ್ಣುಬಿಟ್ಟು ಜಾಗ್ರತಾವಸ್ಥೆಗೆ ಬರುತ್ತೇವೆ.

ಅದು ಹೃದಯದಲ್ಲಿ ಬಂದರೆ ನಿದ್ರೆಬೀಳುತ್ತದೆ. ಕಂಠಕ್ಕೆ ಬಂದರೆ ಸ್ವಪ್ನ ಬೀಳುತ್ತದೆ. ಅದು ದಶಮದ್ವಾರವಾದ ಸಹಸ್ರದಳ ಚಕ್ರಕ್ಕೆ ಹೋದರೆ ನಾವು ತೂರ್ಯಾವಸ್ಥೆಯಲ್ಲಿರುತ್ತೇವೆ. ಅದು ಹುಬ್ಬುಗಳ ನಡುವಿನಿಂದ ಮೇಲಕ್ಕೆ ಹೋಗುವದು ಸುಷುಮ್ನಾ ನಾಡಿ ಮುಖಾಂತರ. ಆ ಸುಷುಮ್ನಾ ನಾಡಿಯ ಕೆಳ ಅಂಶಕ್ಕೆ ಪುರತತಿ ಎಂತ ಹೆಸರು. ಆ ಪುರತತಿ ಮುಖಾಂತರ ಆ ಶಕ್ತಿ ಕೆಳಕ್ಕೆ ಬರುವದು. ಹೀಗೆ ಆತ್ಮಶಕ್ತಿಗೆಸಿರ್ಸಿಯಲ್ಲಿರುವ ಜನಿಸಿದ 20 ದಿವಸದೊಳಗೆ ಮಾತ್ರ ಶಿಶುವಿನಲ್ಲಿ ಹೃದಯದಿಂದ ಸಹಸ್ರಾರು ವರೆಗೆ ಆತ್ಮಶಕ್ತಿ ಸ್ವಾಭಾವಿಕ ಚಲಿಸುತ್ತದೆ. ಮನಸ್ಸಿನ ಕಾರ್ಯ ಕಿಂಚಿತ್ ಶುರು ಆದ ನಂತರ ಅಂದರೆ ಆ ಶಿಶು ತನ್ನ ತಾಯಿಯ ಸ್ವರದ ಗುರ್ತು, ತನ್ನ ತಾಯಿಯ ರೂಪದ ಗುರ್ತು ತಿಳಿಯಲಿಕ್ಕೂ, ಬಾಯಿಯಲ್ಲಿ ಹಾಕಿದ ಕಹಿ ಅಥವಾ ಸಿಹಿ ಪದಾರ್ಥದ ರುಚಿ ತಿಳಿಯಲಿಕ್ಕೆ ಶುರುವಾದಕೂಡಲೇ ಆ ಆತ್ಮಶಕ್ತಿಯು ಆಜ್ಞಾಚಕ್ರದಿಂದ ಮೇಲೆ ಹೋಗುವದಿಲ್ಲ. ಕೆಳಕ್ಕೆ ಕಂಠ, ಕಣ್ಣುಗಳು ಹೃದಯಕ್ಕೆ ಮಾತ್ರ ಹೋಗುತ್ತದೆ. ಆ ಶಕ್ತಿಯನ್ನು ಸಹಸ್ರಾರಕ್ಕೆ ಕೊಂಡುಹೋಗಬೇಕಾದರೆ ನಾವು ಕುಂಡಲಿನಿ ಶಕ್ತಿಯನ್ನೇ ಅದರ ವಾಹನಮಾಡಿ, ಆ ಕುಂಡಲಿನಿ ಶಕ್ತಿ ಮೂಲಕ ಮೇಲಕ್ಕೆ ಸೆಳೆಯ ಬೇಕು.

ಈ ಮೇಲಿನ ಪ್ರಾಣಾಯಾಮ ಅಭ್ಯಾಸಯುಕ್ತ ಕುಂಡಲಿನಿಶಕ್ತಿ ಚಾಲನವೇ ನಮ್ಮ ಪಿಂಡಾಂಡದಲ್ಲಿ ಕ್ಷೀರಸಾಗರಮಥನ. ಈ ಕುಂಡಲಿನಿ ಶಕ್ತಿಯೇ ಸರ್ಪಿಣಿ ಎಂಬ ಹೆಸರಿನಿಂದ ವಾಸುಕಿಯ ವೃತ್ತಿ ನಡೆಸುತ್ತದೆ. ಈ ಮಥನಕಾಲದಲ್ಲಿ ನಾನು ಷಟ್ಚಕ್ರಗಳನ್ನು ನಾನಾ ವಿಧದ ವ್ಯಾಯಾಮ ಮಾಡಿ ಚೇತರಿಸಿದ್ದೇನೆ. ಇದೆಲ್ಲಾ ಮಾಡುವ ಕ್ರಮ ನನಗೆ 19ನೇ ಪಾನಿನಲ್ಲಿ ನಮೂದಿಸಿದ ಪ್ರಕಾರದ (mystic writing) ಗುಪ್ತ ಲಿಪಿ ಮುಖಾಂತರ ನನಗೆ ನನ್ನ ಗುರು ದತ್ತಾತ್ರೇಯನು ಆಗಾಗ್ಗೆ ತಿಳಿಸುತ್ತಿದ್ದನು. ಆ ಲಿಪಿಯು ಇವತ್ತಿನ ವರೆಗೂ ವ್ಯಾಯಾಮದಲ್ಲಿ ತಬ್ಬಿಲಿ ಆಗಬೇಕಾದರೆ ತಲೆಯ ಮೇಲೆ ನನ್ನ ತರ್ಜನಿ ಬೆರಳುಗಳು ಬರೆಯುತ್ತವೆ. ನಾನು ಆ ವ್ಯಾಯಾಮಕಾಲದಲ್ಲಿ ಪಶ್ಚಿಮೋತ್ತಾನ ಆಸನದಲ್ಲಿರುವಾಗ ಇಡೀ ಬೆನ್ನೆಲುಬಿನಲ್ಲಿ ಸಹಿಸಿಕೊಳ್ಳಲಶಕ್ಯವಾದ

ಚೇನೆಯಾಗಲು, ಒಂದು ಬಿಳೀ ಪ್ರಕಾಶವಾನ ಕೈ ನನ್ನ ಬೆನ್ನಿನ ಮೇಲೆ ಸವರಿಸಿದಂತೆ ಆಗಿ ಕೂಡಲೇ ಆ ನೋವು ನಿಲ್ಲುತ್ತಿತ್ತು. ಆ ನಾಡಿ ಸ್ಥೈರ್ಯಕೊಡುವ ಸಾಮರ್ಥ್ಯ ಕೂರ್ಮವಾಯುವಿನದು. ಆ ಕೂರ್ಮ ವಾಯುವಿನ ಶಕ್ತಿಯಿಂದಲೇ ಈ ಪ್ರಾಣಾಪಾನ ಐಕ್ಯ ಮತ್ತು ಕುಂಡಲಿನಿ ಉದ್ಘಾಟ ಸಾಧ್ಯವಾಗುತ್ತದೆ. ಈ ಕೂರ್ಮದ ಶಕ್ತಿ ಮೂಲಾಧಾರದಿಂದ ಆಗ್ನೇಯುವರೆಗೆ ವ್ಯಾಪಿಸಿರುತ್ತದೆ. ಆ ಶಕ್ತಿಯಿಂದಲೇ ನಾವು (yawn) ಆಕಳಿಸುವುದು. ಕ್ಷೀರಸಾಗರಮಥನದಲ್ಲಿ ಶುರುವಿಗೆ 3 ಲೋಕ ಗಳನ್ನು ದಹನಮಾಡುವ ವಿಷ ಹೊರಡಿತು. ಅದೇ ಪ್ರಕಾರ ಯೋಗಾ ಭ್ಯಾಸ ಮಾಡುವ ಯೋಗಿಗೆ ಪ್ರಥಮ ತಾನು ಯೋಗಿ ಎಂಬ ಅಹಂಕಾರ ಬರುತ್ತದೆ. ಈ ಬಾಬಿನಲ್ಲಿ ಒಂದು ಕಥೆ ಉಂಟು. ಒಬ್ಬ ಯೋಗಿಯು ಒಂದು ಮರದ ಅಡಿಯಲ್ಲಿ ಕುಳಿತು ಅಭ್ಯಾಸಿಸುವಾಗ ಅವನ ತಲೆಯ ಮೇಲೆ ಮರದ ಕೊಂಬೆಯಲ್ಲಿದ್ದ ಒಂದು ಬಕಪಕ್ಷಿಯು ಹೇತುಹಾಕಿತು. ಆ ಯೋಗಿ ಸಿಟ್ಟಿನಿಂದ ಅದನ್ನು ನೋಡಲು, ಅದು ಭಸ್ಮವಾಯಿತು. ಆ ಯೋಗಿ ತನಗೆ ಯೋಗದ ಶಕ್ತಿ ಬಂತು; ತಾನು ದೊಡ್ಡ ಯೋಗಿ ಎಂಬ ಅಹಂಕಾರಯುಕ್ತನಾಗಿ ಅವನಿರುವ ಕಾಡಿನ ಆಶ್ರಮದಿಂದ ಹತ್ತಿರಕ್ಕಿರುವ ಮನೆಗೆ ಭಿಕ್ಷಾಟನಕ್ಕೆ ಹೋದನು. ಭಿಕ್ಷೆ ಕೊಡಲಿಕ್ಕೆ ಆ ಮನೆಯ ಯಜಮಾನತಿಯು ತಡಮಾಡಿದಳೆಂದು ಅವಳಿಗೆ ವಕ್ರದೃಷ್ಟಿಯಿಂದ ನೋಡಿದಾಗ, "ನನಗೆ ಹೆದರಿಸಬೇಡ, ನೀನು ಸುಟ್ಟ ಬಕದ ಹಾಗಲ್ಲ ನಾನು" ಎಂತ ಅವಳು ಹೇಳಿದಳು. ತಾನು ಕಾಡಿನಿಂದ ಹೊರಗೆ ಬರುತ್ತೇನಷ್ಟೆ. ಹೀಗಿರುತ್ತಾ ಈ ಬಕದ ಸುದ್ದಿ ಇವಳಿಗೆ ಹೇಗೆ ತಿಳಿಯಿತೆಂದು ಆಶ್ಚರ್ಯ ಪಟ್ಟು ಕೇಳಲು, ಅವಳು ಹೇಳಿದಳು: "ನಾನು ಪತಿವ್ರತೆ. ಪಾತಿವ್ರತ್ಯ ಬಲ ನಿಮ್ಮ ಗಂಡಸರ ತಪೋಬಲಕ್ಕಿಂತ ಶ್ರೇಷ್ಠ" ಎಂದಳು.

ಈ ಷಟ್ಚಕ್ರಗಳ ವಿವರ ಈ ಕೆಳಗಿನ ದತ್ತಾತ್ರೇಯಾಷ್ಟಕದಿಂದ ಸ್ಪಷ್ಟವಾಗುತ್ತದೆ:—

**193.** ಮೂಲಾಧಾರೆ ವಾರಿಜಪತ್ರೆ ಸಚತುಷ್ಕೇವಂ ಶಂ ಷಂ ಸಂ
ವರ್ಣನಿಶಾಲ್ಯೆ ಸುವಿಶಾಲ್ಯೆ। ರಕ್ತಂ ವರ್ಣಂ ಶ್ರೀ ಗಣನಾಥಂ
ಭಗವಂತಂ ದತ್ತಾತ್ರೇಯಂ ಶ್ರೀ ಗುರುಮೂರ್ತಿಂ ಪ್ರಣ

ತ್ರೊಸ್ಮಿ ॥ ೧ ॥ ಸ್ವಾದಿಷ್ಠಾನೆ ಷಡ್ದಳಪತ್ರೆಂತಸುಲಿಂಗೆ । ಬಾಲಾಂತರಾ ವರ್ಣವಿಶಾಲ್ಯೈ ॥ ಸುವಿಶಾಲ್ಯೈ ॥ ಪೀತಂ ವರ್ಣಂ ವಾಕ್ಪತಿರೂಪಂ ದ್ರುಹಿಣಂತಂ । ದತ್ತಾತ್ರೇಯಂ ಶ್ರೀಗುರು ॥ ೨ ॥ ನಾಭಿಸ್ಥಾನಂ ಪತ್ರದಶಾಂಕಂ ಡಫವರ್ಣಂ ಲಕ್ಷ್ಮೀಕಾಂತಂ ಗರುಡಾರೂಢಂ ಅರವಿಂದಂ । ನೀಲಂ ವರ್ಣಂ ನಿರ್ಗುಣರೂಪಂ ನಿಗಮಾಖ್ಯಂ । ದತ್ತಾತ್ರೇಯಂ ಶ್ರೀ ॥ ೩ ॥ ಹೃತ್ಪದ್ಮಾಂತೆ ದ್ವಾದಶಪತ್ರೆ ಕಠವರ್ಣಂ ಸಾಂಬಂ ಶೈವಂ ಹಂಸವಿಶೇಷಂ ಸಮಯಂತಂ ಸರ್ಗ ಸ್ಥಿತ್ಯಂತಂಕುರುವಂತಂ ಶಿವಶಕ್ತಿಂ ದತ್ತಾತ್ರೇಯಂ ಶ್ರೀಗುರು ಮೂರ್ತಿಂ ಪ್ರಾಣತೊಸ್ಮಿ ॥ ೪ ॥ ಕಂಠಸ್ಥಾನೆ ಚಕ್ರವಿಶುದ್ಧೆ ಕಮಲಾಂತೆ ಚಂದ್ರಾಕಾರೆ ಷೋಡಶವರ್ಣೆ ಸ್ವರವರ್ಣೆ । ಮಾಯಾಧೀಶಂ ಜೀವಮಯಂತೈಜಸರೂಪಂ ದತ್ತಾತ್ರೇಯಂ ಶ್ರೀಗುರುಮೂರ್ತಿಂ ಪ್ರಾಣತೊಸ್ಮಿ ॥ ೫ ॥ ಆಜ್ಞಾಚಕ್ರೆ ಭ್ರುಕುಟಿಸ್ಥಾನೆ ದ್ವಿದಳಾಂತೆ ಹಕ್ಷಂ ಬೀಜಂ ಜ್ಞಾನ ಸಮುದ್ರಂಗುರುಮೂರ್ತಿಂ ವಿದ್ವಿದ್ವರ್ಣಂಜ್ಞಾನಮಯಂತಂ ವಿರುಪಾಕ್ಷಂ । ದತ್ತಾತ್ರೇಯಂ ಶ್ರೀಗುರುಮೂರ್ತಿಂ ॥ ೬ ॥ ಮೂರ್ಧ್ನಿಸ್ಥಾನೆ ವಾರಿಜಪತ್ರೆ ಶಶಿರೂಪಂ ಶುಭ್ರಂ ವರ್ಣಂ ಪತ್ರ ಸಹಸ್ರಂ ಚತೂರೀಯಂ ಓಂ ಬೀಜಾಖ್ಯಂ ವರ್ಣ ಸಹಸ್ರಂ ಚತುರೀಯಂ ದತ್ತಾತ್ರೇಯಂ ಶ್ರೀಗುರು ಮೂರ್ತಿಂ ॥ ೭ ॥ ಶಾಂತಾಕಾರಂ ಶೇಷಶಯಾನಂ ಸುಖ ವಂದ್ಯಂ ಕಾಂತಾನಾಥಂ ಕೋಮಲಗಾತ್ರಂ ಕಮಲಾಕ್ಷಂ । ಚಿತಾರತ್ನಂ ಚಿದ್ಘನ ಪೂರ್ಣಂದ್ವಿಜರಾಜ್ಯಂ ದತ್ತಾತ್ರೇಯಂ ಶ್ರೀಗುರುಮೂರ್ತಿಂ ಪ್ರಾಣತೊಸ್ಮಿ ॥ ೮ ॥ ಬ್ರಹ್ಮಾನಂದಂ ಬ್ರಹ್ಮಮುಕುಂದಂ ಭಗವಂತಂ । ಬ್ರಹ್ಮಾನಂದಂ ಸಪ್ತಮನಂತಂ ಭಗರೂಪಂ । ಪೂರ್ಣ ಬ್ರಹ್ಮಾನಂದಮನಂ ತಂ ಗುರುಮೂರ್ತಿಂ । ದತ್ತಾತ್ರೇಯಂ ಶ್ರೀಗುರುಮೂರ್ತಿಂ ಪ್ರಣ ತೊಸ್ಮಿ ॥ ೯ ॥

## ೩. ವರಾಹ ಅವತಾರ

ಪುರಾಣದ ಕಥೆ ಏನೆಂದರೆ, ದೈತ್ಯ ಹಿರಣ್ಯಾಕ್ಷನು ಪೃಥ್ವಿಯನ್ನು ಪಾತಾಳಕ್ಕೆ ಒಯ್ಯಲು, ವಿಷ್ಣು ವರಾಹ ಅವತಾರ ತಾಳಿ, ಆತನನ್ನು ಸಂಹಾರ ಮಾಡಿ ಪೃಥ್ವಿಯನ್ನು ಉದ್ಧಾರಮಾಡಿದನು.

260,000,000,000 (cubic metres) ಘನ ಪರಿಮಾಣದು 24,902 ಮೈಲು ಸುತ್ತಳತೆಯ ಪೃಥ್ವಿಯನ್ನು ಕಂಕಳಾಗೆ ಹಾಕಿಕೊಂಡ, ಹೋಗಲಿಕ್ಕೆ ಅದು ಒಂದು ಫುಟ್‌ಬೋಲಲ್ಲ. ಅವನು ಹೇಗೆ ಕೊಂಡು ಹೋದನು ಎಂಬುದು ತಿಳಿದುಕೊಳ್ಳಲಿಕ್ಕೆ ಕಠಿಣ.

ಗರ್ಭದ ಬೆಳವಣಿಗೆ ನೋಡುವಾಗ ಈ ಮೂರನೇ ಸ್ಥಿತಿಯಲ್ಲಿ ಮಗು 4 ಕಾಲಿನಿಂದ ಅಂದರೆ ಮೊಣಕಾಲು ಕೈಗಳನ್ನೂರಿ ನಡೆಯುವುದು, ಕೈಗೆ ಸಿಕ್ಕಿದ್ದನ್ನು ಬಾಯಿಗೆ ಹಾಕುವುದು ಮತ್ತು ಹಮೇಶಾ ಕೂಗುವುದು ಸಾಧಾರಣ ವರಾಹದ ಹಾಗೆಯೇ ಸರಿಹೋಲುತ್ತದೆ. ಆದರೆ ವರಾಹಾವತಾರ ನಮ್ಮ ಶರೀರದಲ್ಲಿ ಹೇಗೆ ಅವತಾರ ಕೃತ್ಯಮಾಡುತ್ತದೆ? ಇದರ ವಿಚಾರ ಹೇಗೆ? ಹಂದಿ ತನ್ನ ಅಮೇಧ್ಯ ತಿನ್ನುವುದಿಲ್ಲ, ಆದರೆ ಮಗು ತನ್ನ ಅಮೇಧ್ಯ ಸಹಾ ಬಾಯಿಗೆ, ತಲೆಗೆ ಹಾಕುತ್ತಿರುವುದು.

ಬಾಕಿ ಪ್ರಾಣಿಗಳೆಲ್ಲಾ ಪೃಥ್ವಿಯ ಮೇಲ್ಭಾಗದಲ್ಲಿ ಬೆಳೆಯುವ ದವಸ, ಧಾನ್ಯ, ಫಲವಸ್ತು ತಿನ್ನುವಾಗ, ವರಾಹವು ನೆಲದ ಅಡಿಯಲ್ಲಿ ಕೊರೆದು ಗೆಡ್ಡೆಗೆಣಸು ತಿನ್ನುತ್ತದೆ. ಹಾಗೆಯೇ

ಹಿರಣ್ಯಾಕ್ಷ ಅಂದರೆ ಭಂಗಾರದಲ್ಲಿಯೇ ದೃಷ್ಟಿ ಇದ್ದವನು. ಭಂಗಾರದಲ್ಲಿ ಆಶೆ ಇಟ್ಟು, ಪೃಥ್ವಿ ಕೊರೆದು, ಆದಿ ಭಂಗಾರದ ಗನಿಗಳಿಂದ ಚಿನ್ನ ತೆಗೆದವನು ಹಿರಣ್ಯಾಕ್ಷ. ಆತನ ರಾಜಧಾನಿ ಹಿರಣ್ಯಪುರ. ಆತನ ವೃತ್ತಿ ಎಲ್ಲಾ ಪಾತಾಳದಲ್ಲಿ. ಅದರ ಅಡಿಯಲ್ಲಿ ಪೃಥ್ವಿಯ ಹೃದಯದಲ್ಲಿ ಹಿರಣ್ಯಕ್ಕಿಂತ ಅತಿ ಹೆಚ್ಚು ಮೌಲ್ಯದ ಪೃಥ್ವಿಯ ಸ್ವಾಭಾವಿಕ ಲಕ್ಷಣವಾದ ಶಾಂತಿ ಉಂಟು. ಪೃಥ್ವಿಯ ಮೇಲೆ ಇರುವ ಸಕಲ ವಿಷಯಗಳನ್ನು ಯಾ ವಸ್ತುಗಳನ್ನೂ ಕ್ರಯಕ್ಕೆ ತೆಗೆದುಕೊಳ್ಳುವ ಶಕ್ತಿ ಭಂಗಾರಕ್ಕೆ ಇದ್ದು ಹಿರಣ್ಯವು ಅವುಗಳಿಗಿಂತ ಶ್ರೇಷ್ಠ. ಈ ಹಿರಣ್ಯಕ್ಕಿಂತ ಅತಿ ಮೌಲ್ಯದ್ದು ಶಾಂತಿ. ಶಾಂತಿಯ ಒಂದು ಕಣ ಯಾ ಅಣುವಿನಿಂದ ಲೋಕದ ಸಕಲ

ಹಿರಣ್ಯ ಕೊಂಡುಕೊಳ್ಳಬಹುದು. ಪೃಥ್ವಿಗೆ ಸುಡುಮಣ್ಣು ಹಾಕಿ, ನೇಗಿಲಿನಿಂದ ಹೂಡಿ, ಸೈಂಗೋಲು, ಕತ್ತಿಗಳಿಂದ ಸೀಳಿ, ದುರ್ವಾಸನೆಯ ಗೊಬ್ಬರ, ತಿಪ್ಪೆರಾಶಿ ಹಾಕಿದರೂ, ಶಾಂತಿಬಲದಿಂದ ಸಹನಮಾಡಿ ತನಗೆ ದುಃಖಕೊಡುವವರಿಗೆ ಬಿತ್ತಿದರ ಹತ್ತು ಪಾಲು ಹೆಚ್ಚು ಒಳ್ಳೇ ಫಲ ಪೃಥ್ವಿ ಕೊಡುತ್ತದೆ. ಭಂಗಾರದಲ್ಲಿಯೇ ರತನಾಗಿ ವಿಷಯಭೋಗಗಳನ್ನು ಭಂಗಾರದಿಂದ ಪಡೆದು ವಿಷಯಲಂಪಟನಾಗಿರುವ ಹಿರಣ್ಯಾಕ್ಷನನ್ನು ಸಂಹರಿಸಬೇಕಾದರೆ ಆತನ ಭಂಗಾರಕ್ಕಿಂತ ಹೆಚ್ಚು ಸಾಮರ್ಥ್ಯವಿರುವ ವೈರಾಗ್ಯದಿಂದ ವಿಷಯಗಳನ್ನು ಧಿಕ್ಕಾರಮಾಡಿ ಹೇಮಲೋಷ್ಟಂಗಳ ಸಮದರ್ಶಿಯಾದ ಸತ್ಪುರುಷನ ಶಾಂತಿ ಬೇಕು. ಆ ಶಾಂತಿ ಪೃಥ್ವಿಯ ಅಡಿಯಲ್ಲಿರುವಂತೆ, ಮನುಷ್ಯ ದೇಹದಲ್ಲಿ ಆ ಶಾಂತಿ ಇರುವುದು ಮೂಲಾಧಾರದ ಪರಾವಾಚೆಯ ಅಡಿಯಲ್ಲಿ. ಅಂದರೆ ಪರಾವಾಚಾ ಬಂದುಮಾಡಿದರೆ ಶಾಂತಿ. ಪರಾವಾಚಾ ಬಂದುಮಾಡುವುದಕ್ಕೆ ಯೋಗದಲ್ಲಿ **ಮೂಲ ಬಂಧ** ಎನ್ನುತ್ತಾರೆ. ಪರಾವಾಚಾ ಬಂದುಮಾಡಿದರೆ ಮನಸ್ಸಿನ ಸಂಕಲ್ಪ ವಿಕಲ್ಪಗಳೆಲ್ಲಾ ಬಂದು ಆಗುತ್ತವೆ. ಪ್ರಾಣಾಪಾನ ಎಂಬ ಎರಡು ವಾಯುಗಳನ್ನು ಒಟ್ಟುಕೂಡಿಸಿದರೆ ಮೂಲಬಂಧದಿಂದ ಪರಾವಾಚಾ ಬಂದಾಗುತ್ತದೆ. ಹೀಗೆ ವರಾಹ ಅವತಾರ ಮನುಷ್ಯನ ದೇಹದಲ್ಲಿ ಪ್ರಾಣವಾಯುರೂಪದಲ್ಲಿದ್ದು, ಅದು ವರಾಹ ಪೃಥ್ವಿ ಕೊರೆದು ಅಡಿಗೆ ಹೋಗುವಂತೆ ಮೂಲಾಧಾರಕ್ಕೆ ಹೋಗಿ ಮೂಲಬಂಧಮಾಡುತ್ತದೆ. ಇದು ಯೋಗದಿಂದ ಯಾ ಭಕ್ತಿಯಿಂದ ಸಹಾ ಸಾಧ್ಯ. ಪರಾವಾಚಾ ಬಂದಾಗಿ ವಾಚಾ ಪೂರ್ಣ ಪರಾ, ಪಶ್ಯಂತಿ, ಮಧ್ಯಮಾ ವೈಖರಿ ನಾಲ್ಕೂ ಬಂದಾಗಿ ಮನಸ್ಸು ಮೌನ ಧರಿಸುತ್ತದೆ. ಮೌನವೇ ರಾಜಯೋಗದಲ್ಲಿ ಬ್ರಹ್ಮ ಎಂಬ ಅರ್ಥದ ಅಂಗ.

## ೪. ನರಸಿಂಹ ಅವತಾರ

ಹಿರಣ್ಯಾಕ್ಷನ ಸಹೋದರನಾದ ಹಿರಣ್ಯಕಶಿಪು ಕಠಿಣ ತಪಸ್ಸಿನಿಂದ ಈಶ್ವರನಿಂದ ವರಗಳನ್ನು ಪಡೆದು ಬಲಿಷ್ಠನಾಗಿ, ವಿಷ್ಣು ಮತ್ತು ವಿಷ್ಣು ಭಕ್ತರ ಮೇಲೆ ದ್ವೇಷ ಸಾಧಿಸುತ್ತಾ ಆತನ ಅತ್ಯಾಚಾರದಿಂದ ಅಧರ್ಮ ವೃದ್ಧಿಯಾಗಿ ಧರ್ಮ ನಾಶವಾಗುವ ಕಾಲಕ್ಕೆ ವಿಷ್ಣು ನರಸಿಂಹಾವತಾರತಾಳಿ

ಆತನಿಗೆ ಸಂಹರಿಸಿದನೆಂದು ಪುರಾಣದ ಕಥೆ. ಆತನು ಪಡೆದ ವರಗಳು ಯಾವವೆಂದರೆ:— ತನಗೆ

1. ಮನುಷ್ಯನಿಂದಾಗಲೀ ಮೃಗಗಳಿಂದಾಗಲೀ ಮೃತ್ಯು ಆಗಬಾರದು.

2. ಅಸ್ತ್ರಶಸ್ತ್ರಗಳು ತನ್ನ ದೇಹಕ್ಕೆ ನಾಟಬಾರದು.

3. ಯಾವ ಕಟ್ಟಡದ ಒಳಗಾಗಲೀ ಹೊರಗಾಗಲೀ ಮರಣ ಬರಬಾರದು.

4. ಹಗಲು ಯಾ ರಾತ್ರೆ ಮರಣ ಬರಬಾರದು.

5. ಬ್ರಹ್ಮನ ಸೃಷ್ಟಿಯ ಯಾವ ಪ್ರಾಣಿಗಾದರೂ ತನಗೆ ನಾಶ ಮಾಡುವ ಸಾಮರ್ಥ್ಯ ಇರಬಾರದು.

6. ಪೃಥ್ವಿ ಯಾ ಆಕಾಶದಲ್ಲಿ ನಾಶಮಾಡಬಾರದು.

ವಿಷ್ಣು ಈ ಎಲ್ಲಾ ಶರ್ತಗಳನ್ನು ತಪ್ಪಿಸಿ, ಈಶ್ವರನ ವರಗಳಿಗೆ ಮಾನ್ಯತೆಕೊಟ್ಟು ಸಂಧಿ ಸಾಧಿಸಿ ಹಿರಣ್ಯಕಶಿಪುವನ್ನು ಕೊಂದ ವಿಧ ಹ್ಯಾಗಂದರೆ:—

1. ಮೃಗನೂ ಅಲ್ಲ; ಮನುಷ್ಯನೂ ಅಲ್ಲ; ನರಸಿಂಹ ದೇಹ ಧರಿಸಿದನು.

2. ಅಸ್ತ್ರಶಸ್ತ್ರದಿಂದ ನಾಶಮಾಡದೆ ತನ್ನ ಉಗುರುಗಳಿಂದಲೇ ಹೊಟ್ಟೆ ಬಗೆದನು.

3. ಕಟ್ಟಡದ ಒಳಗೂ ಅಲ್ಲ; ಹೊರಗೂ ಅಲ್ಲ. ಹೊಸ್ತಿಲ ಮೇಲೆ ಕೊಂದದ್ದು.

4. ಹಗಲಲ್ಲೂ ಅಲ್ಲ; ರಾತ್ರೆಯಲ್ಲಿಯೂ ಅಲ್ಲ; ಸಾಯಂ ಸಂಧ್ಯಾಕಾಲದಲ್ಲಿ ಸಂಹರಿಸಿದ್ದು.

5. ಬ್ರಹ್ಮನು ಸೃಜಿಸಿದ ದೇಹಧಾರಣ ಮಾಡಿದ್ದಲ್ಲ, ಸ್ವತಹಾ ಶ್ರೀ ವಿಷ್ಣುವೇ ನಿರ್ಮಾಣ ಮಾಡಿದ ನರಸಿಂಹಾವತಾರ

6. ಪೃಥ್ವಿಯ ಮೇಲೆಯೂ ಅಲ್ಲ; ಆಕಾಶದಲ್ಲಿಯೂ ಅಲ್ಲ; ತನ್ನ ತೊಡೆಗಳ ಮೇಲೆ ಹಿರಣ್ಯಕಶಿಪುವಿಗೆ ಹಾಕಿಕೊಂದದ್ದು.

ಹೀಗೆ ಈ ಮೇಲಿನ 6 ವರಗಳ ನಡುವೆ ಇರುವ ಸಂಧಿ ಸಾಧನ ಮಾಡಿ ಶ್ರೀ ವಿಷ್ಣುವು ಅವತಾರಕೃತ್ಯವನ್ನು ಹ್ಯಾಗೆ ಮಾಡಿದ್ದನೋ ಹಾಗೆಯೇ ಸಾಧಕನು ಸಂಧಿ ಸಾಧಿಸುವದು ಹ್ಯಾಗೆಂದರೆ:—

ಒಂದು ಕಲ್ಪನೆ ಬಂದುಹೋಯಿತು. ಎರಡನೇ ಕಲ್ಪನೆ ಬರುವ ನಡುವೆ ಇರುವ ಬಹು ಅಲ್ಪ ಸಂಧ್ಯಾಕಾಲದಲ್ಲಿ ಮನಸ್ಸು ನಿಸ್ಸಂಕಲ್ಪ ಆಗುತ್ತದೆ. ಅದೇ ಬ್ರಹ್ಮಸ್ಥಿತಿ ಯಾ ಆತ್ಮಸ್ಥಿತಿ. ಆ ಸಮಯವನ್ನು ಕಲ್ಪನೆ ನಿಲ್ಲಿಸಿ ಹೆಚ್ಚಿಸಬೇಕು. ಅದೇ ನಿರ್ವಿಕಲ್ಪ ಸಮಾಧಿ. ಆಗ್ಯೆ ಸಾಧಕನು ಆತ್ಮಸ್ಥಿತಿಯಲ್ಲಿರುತ್ತಾನೆ. ಒಂದು ಶ್ವಾಸ ಹೋಗಿ ಮತ್ತೊಂದು ಬರುವ ನಡುವೆ ಬಹು ಅಲ್ಪಕಾಲ ಕುಂಭಕ ಆಗುತ್ತದೆ. ಆ ಕುಂಭಕದ ಕಾಲ ವೃದ್ಧಿ ಮಾಡುವಂತೆ, ಅಥವಾ ಘಡಿಯಾರದ ಲಂಬಕ (ಪೆಂಡುಲಮ್) ಎಡಬಲಕ್ಕೆ ತಿರುಗುವಾಗ ಎರಡು ಕಡೆಯಲ್ಲಿಯೂ ಬಹು ಅಲ್ಪ ಕಾಲ ನಿಲ್ಲುತ್ತದೆ. ಅದೇ ಸಂಧ್ಯಾಕಾಲ. ಹಗಲು ಕಳೆದು ರಾತ್ರೆ ಬರುವ ಮುಂಚೆ ಒಂದು ಸಂಧ್ಯಾಕಾಲ. ಮಧ್ಯರಾತ್ರೆ ಕರಿಗಾಳಿಯೂ ಇಲ್ಲ, ಭೂಗಾಳಿಯೂ ಇಲ್ಲ, ಅದು ಒಂದು ಸಂಧ್ಯಾಕಾಲ. ಬ್ರಹ್ಮಮುಹೂರ್ತ ಸಮಯ ರಾತ್ರೆ ಹೋಗಿ ಬೆಳಕು ಬರುವ ಮುಂಚೆ ಒಂದು ಸಂಧ್ಯಾಕಾಲ. ಹಗಲು ಸರಿ ಮಧ್ಯಾಹ್ನಕ್ಕೆ ಭೂಗಾಳಿ ಕರಿಗಾಳಿಗಳಿಲ್ಲದೆ ಪಕ್ಷಿಗಳು ಮರದ ಕೊಂಬೆಯಲ್ಲಿ ಕೂತು ಕೂರುವಾಗ, ಯಾವ ಪಕ್ಷಿಯೂ ಮೃಗವೂ ಬಿಸಿಲಿಗೆ ಬಾರದೆ ನೆರಳಿನಲ್ಲಿ ಕೂರುವಾಗ (dosing) ತೂಕಡಿಕೆಯಲ್ಲಿರುವಾಗ ಅದು ಒಂದು ಸಂಧ್ಯಾಕಾಲ. ಹೀಗೆ ಪ್ರತಿ ದಿವಸ ನಾಲ್ಕು ಸಂಧ್ಯಾಕಾಲ ಸಾಧಿಸಿ ಮುಮುಕ್ಷುವು,

**194.** “ನಿದ್ರಾದೌ ಜಾಗರಸ್ಯಾಂತೆಯೊ ಭಾವಉಪಜಾಯತೆ ।
ತಂಭಾವಂ ಧಾರಯನ್ಯೋಗಿ ನ ಧುಃಖೈರಭಿಭೂಯತೆ ॥

ಹಾಗೆಯೇ ಜ್ಞಾತತಾ ಮತ್ತು ಅಜ್ಞಾತತಾ ಇವುಗಳ ನಡುವೆ ಇರುವ ಸಂಧ್ಯಾಕಾಲ ಸಹಾ ಸಾಧಿಸಬೇಕು. ಅದು ಹ್ಯಾಗಂದರೆ:—

ನಿದ್ರೆಯಿಂದ ಎಚ್ಚತ್ತ ಮನುಷ್ಯನು ರಾತ್ರಿ ಕತ್ತಲೆಯಲ್ಲಿ ತನ್ನ ಕೋಣೆಯಲ್ಲಿ ಯಾರೊ ನಿತ್ತಹಾಗೆ ಕಂಡನು; ಯಾರೆಂತ ಗೊತ್ತಾಗಲಿಲ್ಲ. ಅಜ್ಞಾತತಾ ಶುರು ಆಯಿತು; ದೀಪ ತಂದು ನೋಡಿದನು. ಅದು ಸ್ಟೇಂಡಿನ

ಮೇಲೆ ನೇತಾಡುವ ತನ್ನ ಕೋಟು ಮತ್ತು ಚಲ್ಲಾಣ ಎಂತ ಗೊತ್ತಾಗಿ ಜ್ಞಾತತಾ ಬಂದು ಅಜ್ಞಾತತೆಗೆ ತೆಗೆದುಕೊಂಡುಹೋಯಿತು. ಇನ್ನೊಂದು ಅಜ್ಞಾತತೆ ಬರುವ ವರೆಗೆ ಸಂಧ್ಯಾಕಾಲ. ಅಡಿಗೆಕೋಣೆಯಲ್ಲಿ ಕಳ್ಳನು ಕನ್ನ ಕೊರೆಯುವ ಶಬ್ದ ಕೇಳಿ ಅನುಮಾನಪಟ್ಟು ನಿಶ್ಚಯವಿಲ್ಲದೆ ಇರಲು ಅಜ್ಞಾತತಾ ಬಂತು. ದೀಪ ತೆಗೆದುಕೊಂಡು ಅಡಿಗೆಕೋಣೆಗೆ ಹೋಗಲು ಒಂದು ಹೆಗ್ಗಣ ಸಟ್ಟನೆ ಆತನ ಕಾಲಡಿಗೆ ಹಾರಿ ತತ್ತರಿಸಿ ಗಾಬರಿಯಲ್ಲಿ ಉಗುರುಗಳಿಂದ ಕಾಲು ಬಗೆದು ಓಡಿಹೋಯಿತು. ಜ್ಞಾತತಾ ಬಂದು ಅಜ್ಞಾತತೆಗೆ ಕೊಂಡುಹೋಯಿತು. ಇನ್ನೊಂದು ಅಜ್ಞಾತತೆ ಬರುವ ವರೆಗೆ ಸಂಧ್ಯಾಕಾಲ. ಇದು ಆತ್ಮಸ್ಥಿತಿ. ಹೀಗೆ ಸಂಧಿ ಸಾಧಿಸುವರೆ ನರಸಿಂಹ ಅವತಾರ ನಮ್ಮ ದೇಹದಲ್ಲಿ ವ್ಯಕ್ತವಾಗುತ್ತದೆ.

## ೫. ವಾಮನಾವತಾರ

ಪುರಾಣದ ಕಥೆ ಏನೆಂದರೆ, ಬಲಿಚಕ್ರವರ್ತಿಯು ತನ್ನ ಪರಾಕ್ರಮ ದಿಂದ ಭೂಲೋಕ, ಇಂದ್ರಲೋಕಗಳ ಸಂಪತ್ತುಹೊಂದಿ ಅಭಿಮಾನ ದಿಂದ ವಿಷ್ಣುವಿಗೆ ಧಿಕ್ಕರಿಸಿಲು, ವಿಷ್ಣು ವಾಮನಾವತಾರತಾಳಿ ವಟುರೂಪ ದಲ್ಲಿ ತನ್ನ ಕಾಲಡಿಗಳಿಂದ ಮೂರು ಅಡಿಗಳಷ್ಟು ಸ್ಥಳ ತನಗೆ ಕೊಡ ಬೇಕೆಂದು ಬಲಿಯ ಮುಂದೆ ಯಾಚಿಸಲು ಬಲಿಯು ಅದಕ್ಕೆ ಸಮ್ಮತಿಸಲು, ಆತನ ಕಾಲುಅಡಿ ಅತೀ ದೊಡ್ಡದಾಗಿ ಭೂಲೋಕಕ್ಕೆಲ್ಲಾ ವ್ಯಾಪಿಸಿತು. 2ನೇ ಹೆಜ್ಜೆ ಇಂದ್ರಲೋಕ ವ್ಯಾಪಿಸಿತು 3ನೇ ಹೆಜ್ಜೆ ಆತನ ತಲೆಮೇ ಲಿಟ್ಟು ಆತಗೆ ಪಾತಾಳಕ್ಕೆ ಹಾಕಿದನೆಂದು ಪುರಾಣ ಕಥೆ. ಈ ವಾಮ ನಾವತಾರ ನಮ್ಮ ದೇಹದಲ್ಲಿ ಹ್ಯಾಗೆ ವರ್ತಿಸುತ್ತದೆ?

ವಟುವಿಗೆ ಮೌಂಜಿಬಂಧನ ಯಾ ಉಪನಯನಸಮಯ ಗಾಯತ್ರಿ ಮಂತ್ರೋಪದೇಶ ಮಾಡುತ್ತಾರೆ. ಆ ಗಾಯತ್ರೀ ಮಂತ್ರಕ್ಕೆ ಮೂರು ಪಾದಗಳು ಯಾ ಚರಣಗಳುಂಟು. ಅವು ಯಾವವೆಂದರೆ:—

ಪ್ರಥಮ ಚರಣ: ತತ್ಸವಿತುರ್ವರೇಣ್ಯಂ ।
2ನೇ ಪಾದ ಯಾ ಚರಣ: ಭರ್ಗೋದೇವಸ್ಯಧೀಮಹಿ ॥
3ನೇ ಚರಣ: ಧಿಯೋಯೋನ಼ ಪ್ರಚೋದಯಾತ್ ॥

ಈ ಮಂತ್ರಕ್ಕೆ ತ್ರಿಪದಾಗಾಯತ್ರೀ ಎಂದು ಹೆಸರು. ಉಪನಯನ ಆದಕೂಡಲೇ ಗುರುಕುಲಕ್ಕೆ ಹೋಗಿ ಗುರುವಿನ ಮುಖತಃ ಗಾಯತ್ರಿಯ ಮೂರು ರೂಪಗಳಾದ ಗಾಯತ್ರಿ, ಸಾವಿತ್ರಿ, ಸರಸ್ವತಿ ಎಂಬ ಮೂರು ರೂಪಗಳಿಂದ ಗಾಯತ್ರೀ ಅನುಷ್ಠಾನ ಪ್ರಾತಃ ಸಂಧ್ಯಾ ನಕ್ಷತ್ರಗಳು ಕಾಣ ಬರುವಾಗಲೇ ಮಾಡುವದು, ಮಧ್ಯಾಹ್ನ ಸಂಧ್ಯಾ 12 ಗಂಟೆಯ ಒಳಗೆ ಮತ್ತು ಸಾಯಂ ಸಂಧ್ಯಾ ಸೂರ್ಯಾಸ್ತಮಾನ ಸಮಯ ಮಾಡಿ ಶಾಸ್ತ್ರಾಭ್ಯಾಸ, ಶಾಸ್ತ್ರಜ್ಞಾನ ಆಗಿ ತನ್ನ ನಿತ್ಯಕರ್ಮಗಳಿಂದ ಚಿತ್ತಶುದ್ಧಿಯಾಗಿ ಭಕ್ತಿ, ಜ್ಞಾನ, ವೈರಾಗ್ಯದಿಂದ ಬಲಿ ಎಂಬ ತನ್ನ ಅಹಂಕಾರವನ್ನು ಗೆಲ್ಲುತ್ತಾನೆ.

## ೬. ಪರಶುರಾಮ ಅವತಾರ

ಪರಶುರಾಮನು ತನ್ನ ಪರಶುವಿನಿಂದ ಕ್ಷತ್ರಿಯ ಕುಲ ನಾಶಮಾಡಿದನೆಂದು ಪುರಾಣದ ಕಥೆ.

ಉಪನಯನ ಆಗಿ ಗುರುಕುಲದಲ್ಲಿ ಹನ್ನೆರಡು ವರ್ಷ ಗುರುಸೇವೆ ಮಾಡಿ ಆತನ ಅನುಜ್ಞಾನುಸಾರ ವರ್ಣಾಶ್ರಮ ಧರ್ಮದ ಸಕಲ ಕರ್ಮಗಳಲ್ಲಿಯೂ ನಿಪುಣನಾಗಿ ಅಭಿನ್ನಜ್ಞಾನ ಅಂದರೆ "ಪರಮಾತ್ಮಾತ್ಮಯೋರಭಿನ್ನ" ಜ್ಞಾನ ಅಂದರೆ ತಾನು ಜೀವಾತ್ಮ ಆಗಿ ಪರಮಾತ್ಮನಿಂದ ಪ್ರತ್ಯೇಕ ಅಲ್ಲ ಅಹಂಬ್ರಹ್ಮಾಸ್ಮಿ ಎಂಬ ಮಹಾವಾಕ್ಯ ಸಿದ್ಧ್ಯರ್ಥ ಪ್ರಾಪ್ತವಾಗುವ ಜ್ಞಾನಕ್ಕೆನೇ ಪರಶು ಎಂಬರ್ಥ. ಅದರ ಸಾಮರ್ಥ್ಯದಿಂದ ಯೌವನದಲ್ಲಿ ತನ್ನಲ್ಲಿ ತುಂಬಿತುಳುಕುವ ಕಾಮಕ್ರೋಧಾದಿ ಸಕಲ ಷಡ್ವೈರಿ ಯಾನೆ ಆಸುರಿಸಂಪತ್ತಿಯೆಲ್ಲಾ ಗೆದ್ದು, ಸಾಧನಚತುಷ್ಟಯ ಸಂಪನ್ನನಾಗುವುದಕ್ಕೆನೇ ಕ್ಷತ್ರಿಯ ದುಷ್ಟ ಕುಲ ನಾಶಮಾಡಿ ನ್ಯಾಯ ನೀತಿಗನುಸಾರ ಪರಿಪಾಲನೆಮಾಡುವ ದೈವೀಸಂಪತ್ತೆಂಬ ಶಿಷ್ಟ ಅರಸರನ್ನು ನೇಮಕಮಾಡಿ ತನ್ನ ಅವತಾರಕೃತ್ಯ ಪರಶುರಾಮನು ಮಾಡಿದನೆಂಬ ಅರ್ಥ ದೇಹದಲ್ಲಿ ಮಾರಕವಾಗಿರುವ ಷಡ್ವೈರಿಗಳನ್ನು ತಾರಕವಾಗಿ ಮಾಡುವ ವಿದ್ಯೆಗೆ ಪರಶು ಎಂಬರ್ಥ. ಹೀಗೆ:—

1. ರಾಧೆಯ ಕಾಮ. 2. ಶಿಶುಪಾಲನ ಕ್ರೋಧ. 3. ವಾಲ್ಮಿಕಿಯ ಲೋಭ. 4. ಯಶೋದೆಯ ಮೋಹ. 5. ರಾವಣನ ಮದ, ಮತ್ತು

6. ಕಂಸನ ಭಯ—ಈ ದಿವ್ಯ ವ್ಯಕ್ತಿಗಳಲ್ಲಿ ಶ್ರೀ ಕೃಷ್ಣನು ಮಾರಕ ಷಡ್ವೈರಿಗಳನ್ನು ತನ್ನ ಅನುಗ್ರಹದಿಂದ ತಾರಕವನ್ನಾಗಿ ಮಾಡಿದನು.

ಪರಶುರಾಮನಲ್ಲಿ ಸಾಧು ಲಕ್ಷಣಗಳಾದ

195. "ಅಪ್ರಮತ್ತೋ ಗಭೀರಾತ್ಮಾಧೃತಿಮಾನ್ ಜಿತಷಡ್ಗುಣಃ" ಎಂಬೀ ಲಕ್ಷಣಗಳಿದ್ದು-ಆದರ್ಶ ಯೌವನನ ಸ್ಥಿತಿ ಮನುಷ್ಯದೇಹದಲ್ಲಿ ನಿದರ್ಶಿಸಿರುತ್ತಾನೆ.

## ೭. ಶ್ರೀ ರಾಮಾವತಾರ

ರಾಮಾವತಾರ ಮತ್ತು ಕೃಷ್ಣಾವತಾರ ಪೂರ್ಣಾವತಾರಗಳು. ಯಾಕೆಂದರೆ ಬಾಕಿ ಎಲ್ಲಾ ವಿಷ್ಣುವಿನ ಅವತಾರಗಳಲ್ಲಿ ದುಷ್ಟರ ಸಂಹಾರ ಮಾತ್ರ ಮಾಡಿ ಪರಮಪದಕ್ಕೆ ಸೇರಿದನು. ಆದರೆ ಈ ಎರಡು ಅವತಾರಗಳಲ್ಲಿ ದುಷ್ಟರ ನಿಗ್ರಹ ಮಾತ್ರವಲ್ಲ; ಸಕಲ ಸಂಸಾರಿಗಳಿಗೂ ಬ್ರಹ್ಮ ಪ್ರಾಪ್ತಿ ಸಾಧ್ಯಮಾಡಿಕೊಡುವ ಜ್ಞಾನಯೋಗ, ಉಪಾಸನ ಮಾರ್ಗಗಳನ್ನು ಬ್ರಹ್ಮಜ್ಞಾನದ ಸಾಗರವೇ ಎಂಬಂತೆ ಅಮೃತಸಾಗರದಂತಿರುವ ಅಧ್ಯಾತ್ಮ ರಾಮಾಯಣ, ಯೋಗವಸಿಷ್ಠ, ಶಿವಗೀತಾ ಈ ಮೂರು ರಾಮಾವತಾರದಿಂದಲೂ, ಭಗವದ್ಗೀತೆ ಕೃಷ್ಣಾವತಾರದಲ್ಲಿಯೂ ಶ್ರೀಮದ್ಭಾಗವತ ಮಹಾಭಾರತಗಳಿಂದ ಶಾಂತಿಪರ್ವ, ಭಿಕ್ಷುಗೀತ, ಹಂಸಗೀತ, ಕಪಿಲಗೀತ, ಗರ್ಭಗೀತ, ಉದ್ಧವಗೀತ, ಅವಧೂತಗೀತ, ಪರಮಹಂಸಗೀತ, ಐಲಗೀತ ಇತ್ಯಾದಿ ಗೋಪಿಗೀತ, ವೇಣುಗೀತ, ಯುಗಲಗೀತ, ಭ್ರಮರಗೀತ, ಮಹಿಷೀಗೀತ ಇತ್ಯಾದಿ ಗೀತಗಳು ಉದ್ಭವಿಸಿಯವೆ.

ರಾಮಾವತಾರದಲ್ಲಿ ಆದರ್ಶ ಗ್ರಹಸ್ಥನು ಹೇಗಿರಬೇಕು ಎಂಬುದನ್ನು ಕುಲಾಚಾರ, ದೇಶಾಚಾರ, ಲೋಕಾಚಾರ, ಶಾಸ್ತ್ರಾರ್ಥಾರಕ್ಕನುಗುಣವಾಗಿ ತಾನು ಸ್ವತಹಾ ಧರ್ಮ ಆಚರಿಸಿತೋರಿಸಿದ್ದರಿಂದ ಆತನೆ ಮರ್ಯಾದಾ ಪುರುಷೋತ್ತಮನೆನ್ನುತ್ತಾರೆ. ರೈಲ್ವೇ ಇಂಜಿನು ಕಬ್ಬಿಣದ ಪಟ್ಟಿ (rail) ಮೇಲೆಯೇ ಚಲಿಸುವಂತೆ ಏಕಬಾಣ, ಏಕವಚನ, ಏಕಶಯ್ಯಾ

ಈ ಮೂರು ಪ್ರಮಾಣಗಳಿಗನುಸಾರವಾಗಿ ಗ್ರಹಸ್ಥನ ಸ್ವಧರ್ಮ ಆಚರಿಸಿ ತೋರಿಸಿದ್ದಾನೆ. ಅವನ ಅವತಾರಕ್ಕೆ ನೇಮಾವತಾರ ಎಂದು ಹೆಸರು.

ರಾಮಾಯಣ ಕರ್ಮಪ್ರಧಾನ, ಸಾಮಾಜಿಕ ಆಚರಣ ಅದರಲ್ಲಿ ವ್ಯಕ್ತಮಾಡಿದ್ದರಿಂದ ಅದು ಕಣ್ಣಿಗೆ ಸರಿಹೋಲುತ್ತದೆ. ಭಾಗವತ ಭಕ್ತಿಪ್ರಧಾನ. ಭಕ್ತಿ ಪ್ರೇಮದ ಶಿಕ್ಷೆಕೊಡುತ್ತದೆ. ಆದ್ದರಿಂದ ಅದು ಹೃದಯಕ್ಕೆ ಸಮಾನ. ಮಹಾಭಾರತ ಜ್ಞಾನಪ್ರಧಾನ. ಅದು ಶ್ರದ್ಧೆಯನ್ನು ಕಲಿಸುತ್ತಿದ್ದುದರಿಂದ ಮೇಧಾ (brain) ಸಮಾನ. ಶ್ರೀ ರಾಮನು ಆತನ ರಾಜ್ಯದ ಸರ್ವ ಪ್ರಜೆಗಳನ್ನೂ ತನ್ನೊಟ್ಟಿಗೆ ಸಾಕೇತಲೋಕಕ್ಕೆ ಒಯ್ದನೆಂದು ಪುರಾಣ.

## ೮. ಶ್ರೀ ಕೃಷ್ಣಾವತಾರ

ಈ ಅವತಾರಕ್ಕೆ ಪ್ರೇಮಾವತಾರ ಅನ್ನುತ್ತಾರೆ. ಆತನ ವೇಣುಗಾನದಿಂದ ಪ್ರೇಮಸಮಾಧಿತಾಗುವಂತೆ ಆತನು ಮಾಡುತ್ತಿದ್ದನು. ಆತನ ವೇಣುಗೀತ ಓಂಕಾರ. ಅದು ಸದಾಸರ್ವದಾ ಮೊಳಗುತ್ತಾ ಉಂಟು. ಆದರೆ ಅದರ ಸ್ವರ ನಮಗೆ ಕೇಳುವುದು ಹೇಗೆಂತ “ ದೇಹ

> ಗೇಹ ಕರ್ಮಹೆಂ ಸಾರೂನಿ । ಸೆಜೆಂ ಪಹುಡಲಿಂ ಸುಖ ಸಮಾಧಾನಿಂ । ಕೃಷ್ಣ ವೇಣುಗೀತ ಪಡೆಶ್ರವಣಿಂ । ವೃತ್ತಿಉಚಳಲಿ ಭೇಟಿಲಾಗೂನಿ । ಜೀವಿಂ ಲಾಗಲೆಂ ಹರಿಚೆಂ ಧ್ಯಾನ ॥ ೧ ॥ ಕಾಂಹಿಂ ಕೆಲ್ಯಾನರಾಹೆ ಮನ । ಪ್ರೇಮ ಪಡಿಭರೆಂ ಯೇತಸೆ ಸ್ಫಂದನ । ಹರಿಚರಣಿಂ ತೆಂ ವೇಧಲೆಂ ಮನ ॥ ೨ ॥ ಲಾಜ ಸಾಂಡೂನಿ ಝಾಲೆಂಮಿ ನಿರ್ಲಜ್ಜ । ಸಾಸೂಸಾಸರಾಚೆಂ ನಾಹಿಂ ಮಜ ಕಾಜ । ಹರಿ ರುಪಿಂ ತೆಂ ವೇಧಲೆಂ ನಿಜ ॥ ೩ ॥ ಚಿದಾಕಾಶಿಚೆಂ ಸ್ವಚ್ಛ ಚಾಂದಣೆ । ಕೃಷ್ಣ ಪ್ರಭಾತೆಂ ಚಂದ್ರ ಪರಿಪೂರ್ಣ । ಧ್ಯಾತಾಂ ಧ್ಯಾನ ಖುಂಟಲೆಂ ಯೆಣೆ ಗುಣೆ । ಏಕಾ ಜನಾರ್ದನಿಂ ಲಾಧಲೆಂ ಹೆಂಚಿ ಖೂಣ ॥

ಎಂಬ ಅಭಂಗದಲ್ಲಿ ವೇಣುಸ್ವರ ನಾವು ಈಗಲಾದರೂ ಹೇಗೆ ಕೇಳಬಹುದೆಂದು ಏಕನಾಥರು ಹೇಳುತ್ತಾರೆ.

## ಕೃಷ್ಣಪ್ರೇಮ ಅಂದರೇನು?

ನಾರದನು ರಾಧೆಗೆ ಈ ಸವಾಲು ಕೇಳಿದಾಗ ಅವಳು ಹೇಳಿದಳು: "ಶ್ರೀ ಕ್ರಷ್ಣನಿಗೆ ನೋಡಿದಾಕ್ಷಣ ಅವನು ಪುರುಷನೆಂತಾಗಲೀ ತಾನು ಸ್ತ್ರೀ ಎಂತಾಗಲೀ ನಾವಿಬ್ಬರೂ ಮರೆತು ನಿರ್ವಿಕಲ್ಪ ಸಮಾಧಿಯಲ್ಲಿ ಲಿಂಗ ಭೇದ ಹೋಗಿ (sexless) ಆಗಿ ಇರುತ್ತೇವೆ. ಆ ಸ್ಥಿತಿಯಲ್ಲಿ ದೇವ ಭಕ್ತ ಈ ಭೇದ ಇಲ್ಲದೆ ಬ್ರಹ್ಮಸ್ಥಿತಿ ಪ್ರಕಟವಾಗುತ್ತದೆ"ಎಂದಳು.

## ಕೃಷ್ಣನ ಚಕ್ರ

ಇದಕ್ಕೆ ಸುದರ್ಶನ ಚಕ್ರ ಅನ್ನುತ್ತಾರೆ. ಸುದರ್ಶನ ಅಂದರೆ ಸಮ್ಯಕ್ ದರ್ಶನ. ಇದ್ದಂತೆಯೇ ಸತ್ಯರೂಪವನ್ನೇ ನೋಡುವುದು. ಅಂದರೆ "ಬ್ರಹ್ಮಸತ್ಯಂ ಜಗನ್ಮಿಥ್ಯಾ । ಜೀವೋ ಬ್ರಹ್ಮೈವ ನಾ ಪರಃ"

ಶ್ರೀರಾಮ ಶ್ರೀಕೃಷ್ಣನ ಭಜನೆ ರಸಪೂರ್ವಕ ಒಬ್ಬ ಭಕ್ತನು ಈ ಪ್ರಕಾರ ಮಾಡುತ್ತಾನೆ:—

**196.** 1. ಬಂಧು ಗಣೊ ಮಿಲಕಹೊ ಪ್ರೇಮಸೆ ಯದುಪತಿ ಬ್ರಜಪತಿ ಶ್ಯಾಮಾಶ್ಯಾಮ । ಮುದಿತ ಚಿತ್ತಸೆ ಘೋಷಕರೊಪುನಿ ಪತಿತಪಾವನ ರಾಧೆ ಶ್ಯಾಮ ॥ ಟೆಕ ॥ ಜಿವ್ಹಾಜೀವನ ಸಫಲಕರೊ ಕಹೊ ಯದುನಂದನ ಕಹೊ ಘನಶ್ಯಾಮ । ಹೃದಯ ಖೋಲಕರ ಕಹೊ ಮತಚುಕೊ ರುಕ್ಮಿಣಿವಲ್ಲಭ ಶ್ಯಾಮಾಶ್ಯಾಮ ॥ ೧ ॥ ನವನೀರದತನು ಗೌರಮನೋಹರ ಜಯಶ್ರೀ ಮಾಧವ ಜಯ ಬಲರಾಮ । ಉಭಯ ಸಖಾ ಮೋಹನಕೆ ಪ್ಯಾರೆ ಜಯಶ್ರೀ ದಾಮಾ ಜಯತಿ ಸುಧಾಮಾ ॥ ೨ ॥ ಪರಮಭಕ್ತ ನಿಷ್ಕಾಮ ಶಿರೋಮಣಿ ಉದ್ಧವ ಅರ್ಜುನ ಶೋಭಾಧಾಮ । ಪ್ರೇಮಭಕ್ತಿರಸ ಲೀನ ನಿರಂತರ ವಿದುರ ವಿದುರ ಗ್ರಹಿಣಿ ಅಭಿರಾಮ ॥ ೩ ॥ ಅತಿಉಮಂಗಸೆ ಬೊಲೊ ಸಂತತ ಯದುಪತಿ ಬ್ರಜಪತಿ ಶ್ಯಾಮಾಶ್ಯಾಮ । ಮುಕ್ತಕಂಠಸೆ ಸದಾ ಪುಕಾರೊ ಪತಿತ ಪಾವನ ರಾಧೆ ಶ್ಯಾಮ ॥ ೪ ॥

**197.** ಬಂಧು ಗಣೊ ಮಿಲ ಕಹೊಪ್ಯಾರಸೆ ರಘುಪತಿ ರಾಘವ ರಾಜಾರಾಮು । ಮುದಿತ ಚಿತ್ತಸೆ ಘೋಷಕರೊ ಪುನಿ ಪತಿತ ಪಾವನ ಸೀತಾರಾಮು ॥ಟೆಕ॥ ಜಿವ್ಹಾಜೀವನ ಸಫಲಕರೊ ಕಹೊ ರಘುನಂದನ ಜಯಸಿಯರಾಮು । ಹೃದಯ ಖೋಲಕರೊ ಮತಚುಕೊ ಜಾನಕಿವಲ್ಲಭ ಸೀತಾ ರಾಮು ॥ ೧ ॥ ಗೌರರುಚಿರತನು ಘನಶ್ಯಾಮು ಛಬಿ ಜಯಶ್ರೀಲಕ್ಷ್ಮಣ ಜಯಜಯ ರಾಮು ಅನುಜ ಪರಮು ಅನುಗತ ರಘುವರಕೆ ಭರತಶತ್ರುಘನ ಶೋಭಾಧಾಮು ॥ ೨ ॥ ಉಭಯ ಸಖಾ ರಾಘವಕೆ ಪ್ಯಾರೆ । ಕಪಿಪತಿ ಲಂಕಾಪತಿ ಅಭಿರಾಮು । ಪರಮಭಕ್ತ ನಿಷ್ಕಾಮು ಶಿರೋಮಣಿ ಜಯ ಶ್ರೀ ಮಾರುತಿ ಪೂರಣ ಕಾಮು ॥ ೩ ॥

ಅತಿ ಉಮಂಗಸೆ ಬೋಲೋ ಸಂತತ, ರಘು, ಪತಿ ರಾಘವ ರಾಜಾರಾಮು । ಮುಕ್ತಕಂಠಸೆ ಸದಾ ಪುಕಾರೊ । ಪತಿತ ಪಾವನ ಶೀತಾರಾಮು ॥ ೪ ॥

ಶ್ರೀಮದ್ಭಾಗವತದ ಏಕಾದಶಸ್ಕಂಧದ (ಏಕನಾಥಿಯ)ಲ್ಲಿ ಹೀಗೆ ಇದೆ:—

**198.** "ಮಿೂ ಸದಾ ಹೃದಯಿಾಂಚ ವಸೆ । ಪರಿಪ್ರಗಟಲೋಂದಿಸೆ ನಿರ್ವಿಕಲ್ಪೆಂ'

ನಕ್ಷತ್ರಗಳು ಆಕಾಶದಲ್ಲಿ ಇಡೀ ದಿವಸ ಇದ್ದರೂ ಹಗಲು ಸೂರ್ಯನು ಉದಯಿಸಿದ ಕೂಡಲೆ ನಮಗೆ ಕಾಣುವದಿಲ್ಲ, ಹಾಗೆಯೇ ನಮ್ಮ ಹೃದಯ ದಲ್ಲಿ ದೇವರು ಸದಾಕಾಲ ಇದ್ದರೂ ನಮ್ಮ ಚಿತ್ಸೂರ್ಯನು ಸಂಕಲ್ಪ ವಿಕಲ್ಪ ಗಳನ್ನು ನಿಲ್ಲಿಸಿ ಅಸ್ತಕ್ಕೆ ಹೋದರೆ ಮಾತ್ರ ನಾವು ನಿರ್ವಿಕಲ್ಪ ಸಮಾಧಿ ಯಲ್ಲಿ ಆತನನ್ನು ನೋಡುತ್ತೇವೆ.

ಶ್ರೀ ಕೃಷ್ಣನ ಗುಣ ಐಶ್ವರ್ಯ, ವಿಭೂತಿ, ಅವತಾರದ ಲೀಲೆ ವರ್ಣಿಸಲಸಾಧ್ಯ. ವಜ್ರದ ತಾಬಳೆಗಳನ್ನು ಅದರ ಅತಿಶಯ ಪ್ರಕಾಶ ದಿಂದ ಹೇಗೆ ಗಣನೆಗೆ ಅಸಾಧ್ಯವೊ ಹಾಗೆ. ಆತನ ರಾಸಕ್ರೀಡೆಯ

ವರ್ನು ಬಾಲಬ್ರಹ್ಮಚಾರಿ, ಪೂರ್ಣಯೋಗಿ, ಸನ್ಯಾಸಿಯಾದ ಪವಿತ್ರ ಶುಕ ಮುಂತಾದವರಿಗೆ ಮಾತ್ರ ಗೊತ್ತು.

## ೯. ಬೌದ್ಧಾವತಾರ

ಅಸುರ ಜಾಲಂಧರನ ತಪಸ್ಸು ಮಿತಿಮೀರಲು, ಇಂದ್ರಾದಿ ದೇವರುಗಳು ಆತನ ಆಸುರಿಸ್ವಭಾವದಿಂದ ಭಯಭೀತರಾಗಿ ವಿಷ್ಣುವಿಗೆ ಮೊರೆ ಇಡಲು, ಆತನು ಬೌದ್ಧಾವತಾರತಾಳಿ, ಜಾಲಂಧರ ಪತ್ನಿ ವೃಂದೆಯು ಹೂತೋಟಕ್ಕೆ ಹೋಗಿದ್ದಾಗ ಒಂದು ದೊಡ್ಡ ಹುಲಿಯು ಅವಳಿಗೆ ಬೆನ್ನಟ್ಟಿ ಬಂದಾಗ ಅವಳು ಹೆದರಿ, 12 ವರ್ಷದ ಹುಡುಗನಾಗಿ ಅಲ್ಲಿ ನಿಂತಿದ್ದ ಬುದ್ಧನನ್ನು ಆತನು ಬುದ್ಧನೆಂದು ತಿಳಿಯದೆ, ಜೀವದ ಆಶೆಗೆ ಅವನ ಹಿಂದೆ ನಿಂತು ಅವನನ್ನು ಅಪ್ಪಿಹಿಡಿದಳು. ಬುದ್ಧನು ಕೂಡಲೇ ದೊಡ್ಡ ಪ್ರಾಯಸಮರ್ಥ ಮನುಷ್ಯನ ರೂಪ ಧರಿಸಿದನು. ಹೀಗೆ ಪರಪುರುಷನನ್ನು ಅವಳು ಅಪ್ಪಿಹಿಡಿದುದರಿಂದ ಅವಳ ಪಾತಿವ್ರತ್ಯ ಹಾಳಾಯಿತು. ಪತ್ನಿಯ ಪಾತಿವ್ರತ್ಯ ಹಾಳಾದರೆ ಪತಿಯ ತಪೋಭಂಗವಾಗುತ್ತದೆ. ಹೀಗೆ ಬುದ್ಧನು ಜಾಲಂಧರನ ತಪೋಭಂಗಮಾಡಿದನು. ಇದರಿಂದ ನಮಗೆ ಗ್ರಹಸ್ಥರಿಗೆ ಬ್ರಹ್ಮಪ್ರಾಪ್ತಿಯಾಗಬೇಕಾದರೆ ತಾನು ಬ್ರಹ್ಮಚರ್ಯದಲ್ಲಿರಬೇಕು; ಮಾತ್ರವಲ್ಲ, ಪತ್ನಿಯ ಪಾತಿವ್ರತ್ಯ ಸಹ ಕೆಡದಂತೆ ನೋಡಬೇಕು. ಆದ್ದರಿಂದಲೇ ಜಮದಗ್ನಿಯು ತನ್ನ ಪತ್ನಿ ರೇಣುಕಾದೇವಿಯ ಪಾತಿವ್ರತ್ಯ ಭಂಗ ಆದ ಕೂಡಲೇ ಅವಳ ತಲೆಯನ್ನೇ ತನ್ನ ಮಗ ಪರಶುರಾಮನ ಹಸ್ತದಿಂದ ಕತ್ತರಿಸಿದನು. ಈಶ್ವರನಿಗೆ ತ್ರಿಪುರಾಂತಕನೆಂದು ಹೆಸರಿದ್ದರೂ ಈಶ್ವರನು ತನ್ನ ಪಾಶುಪತಾಸ್ತ್ರದ ಮೇಲೆ ಬುದ್ಧನ ಶಕ್ತಿ ಆವಾಹನಮಾಡಿ ಅದರಿಂದ ತ್ರಿಪುರಸಂಹಾರಮಾಡಿದನಾದ್ದರಿಂದ ಈ ಮೇಲಿನ ಅವತಾರ ಸ್ತೋತ್ರದಲ್ಲಿ ಬುದ್ಧನಿಗೆ—

"ದಾನವ ಸತಿ ಮಾನಾಪಹಾರಾ, ತ್ರಿಪುರಮರ್ದನರೂಪಾ ಬುದ್ಧಜ್ಞಾಯಚ ಬೌದ್ಧನಮೊ ಭಕ್ತಂತೆ ಪರಿಪಾಲಯಮಾಂ" ಎಂದು ಹೇಳಿಯದೆ.

ನಾವು ತ್ರಿಪುರಗಳನ್ನು ನಾಶಮಾಡುವದೆಂದರೆ—ಜಾಗ್ರತ್ಸ್ವಪ್ನ,

ಸುಷುಪ್ತಿ ಈ ಮೂರು ಅವಸ್ಥೆಗಳು ತ್ರಿಪುರಗಳೆಂದು ಕೈವಲ್ಯ ಉಪನಿಷತ್ತಿನಲ್ಲಿ ಹೇಳಿಯದೆ:—

**199.** "ಪುನಶ್ಚಜನ್ಮಾಂತರ ಕರ್ಮಯೋಗಾತ್ ಸಏವ ಜೀವಃ। ಸ್ವಪಿತಿ ಪ್ರಬುದ್ಧಃ । ಪುರತ್ರಯೆ ಕ್ರೀಡತಿ ಜೀವ ಸ್ತತಸ್ತು ಜಾತಂ ಸಕಲಂ ವಿಚಿತ್ರಂ । ಆಧಾರಮಾನಂದ ಅಖಂಡ ಬೋಧಂ ಯಸ್ಮಿನ್ ಲಯಂ ಯಾತಿ ಪುರತ್ರಯಂಚ"

ಅಂದರೆ—ಪ್ರಾರಬ್ಧಾನುಸಾರ ನಿದ್ರೆಯಲ್ಲಿದ್ದವನು ಇಲ್ಲವೆ ಸ್ವಪ್ನಾವಸ್ಥೆಗೆ ಬಂದು ಸ್ವಪ್ನದ ಸೃಷ್ಟಿ ನೋಡುತ್ತಾನೆ. ಇಲ್ಲವೆ ಜಾಗ್ರದಾವಸ್ಥೆಗೆ ಬಂದು ಜಾಗ್ರತಿಯ ಪ್ರಪಂಚವನ್ನು ನೋಡುತ್ತಾನೆ. ಈ ಮೂರು ಅವಸ್ಥೆಗಳಲ್ಲಿ ಕ್ರೀಡಿಸುವ ಪರಮಾತ್ಮನು ಆಧಾರಭೂತನಾಗಿ, ಆ ತತ್ತ್ವದಲ್ಲಿಯೇ ಈ ಮೂರು ಪಟ್ಟಣಗಳು ಅದೇ ಸ್ವರೂಪದಲ್ಲಿ ಲೀನವಾಗುತ್ತವೆ.

**200.** "ಅಧರ್ಮಾಭಿ ಭವತ್ ಕೃಷ್ಣ ಪ್ರದುಶ್ಯಂತಿ ಕುಲಸ್ತ್ರೀಯಃ ಸ್ತ್ರೀಶುದುಷ್ಟೇಶು ವಾರ್ಷ್ಣೆಯ ಜಾಯತೆ ವರ್ಣಸಂಕರಃ ಸಂಕರೊ ನರಕಾಯೈವ ಕುಲಘ್ನನಂ ಕುಲಸ್ಯಚ । ಪತಂತಿ ಪಿತರೊ ಹ್ಯೇಷಾಂ ಲುಪ್ತಪಿಂಡೋದಕ ಕ್ರಿಯಾಃ ॥

ಅಂದರೆ ಅಧರ್ಮಾಧಿಕ್ಯದಿಂದ ಕುಲಸ್ತ್ರೀಯರು ಅನಾಚಾರಿಯಾಗುತ್ತಾರೆ. ಸ್ತ್ರೀಯರು ವರ್ಣಸಂಕರರಾದರೆ ಕುಲನಾಶ. ವರ್ಣಸಂಕರವು ಕುಲಘ್ನರನ್ನೂ ಇಡೀ ಕುಲವನ್ನೂ ನರಕಕ್ಕೆ ಎಳೆಯುತ್ತದೆ; ಮತ್ತು ಮೃತ ಪಿತೃರು ಸಹಾ ಪಿಂಡೋದಕದ ಹಕ್ಕು ಕಳಕೊಳ್ಳುತ್ತಾರೆ."

—ಭ. ಗೀ. I 41, 42.

## ೧೦. ಕಲ್ಕಿ ಅವತಾರ

ಪುರಾಣದ ಚರಿತ್ರೆ ಏನೆಂದರೆ, ಕಲಿಯುಗದ ಅಂತ್ಯಕ್ಕೆ ರಾಜರೆಲ್ಲಾ ದರೋಡೆಖೋರರಾಗಿ ಅಧರ್ಮ ಹೆಚ್ಚಾಗಲು, ವಿಷ್ಣು ಯಶ ಬ್ರಾಹ್ಮಣನಲ್ಲಿ ಕಲ್ಕಿ ಎಂಬ ಹೆಸರಿನಿಂದ ಜನಿಸಿ ಅವತರಿಸುತ್ತಾನೆ. ಆಗ ಸಮಾಜದಲ್ಲಿ ಧನವಂತನೇ ಘನಸ್ಥನೆಂತಲೂ, ಸಂಪತ್ತುಳ್ಳವನೇ ಸದ್ಗುಣಿ ಎಂತಲೂ,

ಪತಿಪತ್ನಿಯರೊಳಗೆ ಕಾಮಾತುರ, ಕಾಮಾಂಧರಾಗುವುದೇ ಪ್ರಧಾನ ಕರಾರು ಎಂತಲೂ ಸುಳ್ಳು ಹೇಳದೆ ವ್ಯವಹಾರ ಅಸಾಧ್ಯ ಎಂಬ ಅಭಿಪ್ರಾಯದಿಂದ ಅನೃತವೇ ಜೀವನದಲ್ಲಿ ಜಯಕ್ಕೆ ಕಾರಣವೆಂತಲೂ, ಸ್ತ್ರೀ ಸುಖವೇ ಅತೀ ಶ್ರೇಷ್ಠ ಸುಖವೆಂತಲೂ, ಅಂತರದಲ್ಲಿ ಲೇಶವಾದರೂ ಪರಮಾರ್ಥ ಶ್ರದ್ಧೆ ಇಲ್ಲದೆ ಹೊರಗಿನ ಡಂಭಾಚಾರ ಮಾತ್ರ ಇರುವುದೆಂತಲೂ –ಈ ರೀತಿ ಜಗವೆಲ್ಲಾ ವರ್ತಿಸುವುದು.

ಇಡೀ ಸಾಮಾಜಿಕ ರಚನೆ, ಧಾರ್ಮಿಕಭಾವ ಮತ್ತು ಸಕಲ ಆಚರಣೆಗಳು ನಾಶವಾಗುವುದರಿಂದ ಪಂಚಾಂಗ ಸಮೇತ ಎಲ್ಲಾ ನಾಶಮಾಡಬೇಕಾಗುವುದು. ಅಧರ್ಮ ಪೂರಾ ನಾಶಮಾಡಿ ಧರ್ಮಸ್ಥಾಪನೆ ಕಲ್ಕಿ ಮಾಡುತ್ತಾನೆ. ಮತ್ತು

"ನಸ್ತ್ವಂ ನಾಹಂ ನಾಯಂ ಲೋಕಂ"

ಎಂಬ ಜ್ಞಾನ ಪ್ರಳಯಮಾಡಿ ಆತ್ಮಸ್ಥಿತಿ, ಬ್ರಹ್ಮಸ್ಥಿತಿ ಅಥವಾ ಸ್ವರೂಪಸ್ಥಿತಿ ಪ್ರಾಪ್ತಿಯ ಮಾರ್ಗ ಪ್ರದರ್ಶಿಸುತ್ತಾನೆ.

---

ಉಪಾಸಕರು ತಮ್ಮ ಉಪಾಸನೆ ದೇವರಿಗೆ ಸೃಷ್ಟಿ, ಸ್ಥಿತಿ, ಲಯ ಮಾಡುವ ಸಾಮರ್ಥ್ಯ ಉಂಟೆಂದು ತೋರಿಸಲಿಕ್ಕೆ ಪ್ರತಿಯೊಬ್ಬ ದೇವರ ಪ್ರತಿಮೆಗೆ ಅದರ ಸೂಚಕವಾಗಿ,

ವಿಷ್ಣುವಿಗೆ ಶಂಖ, ಚಕ್ರ, ಗದಾ, ಪದ್ಮ.
ಈಶ್ವರನಿಗೆ ಡಮರು, ಫಾಲನೇತ್ರ, ತ್ರಿಶೂಲ, ಪಾಶುಪತಾಸ್ತ್ರ.
ಶ್ರೀಕೃಷ್ಣನಿಗೆ ಕೊಳಲು, ಸುದರ್ಶನಚಕ್ರ.
ಸರಸ್ವತಿಗೆ ವೀಣಾ, ಪುಸ್ತಕ.
ದತ್ತಾತ್ರೇಯನಿಗೆ ಶಂಖ, ಚಕ್ರ, ಗದಾ, ಪದ್ಮ, ತ್ರಿಶೂಲ.
ಗಣೇಶನಿಗೆ ಡಮರು, ಪಾಶ, ಅಂಕುಶ, ತ್ರಿಶೂಲ ಕೈಗಳಲ್ಲಿ ಕೊಡುತ್ತಾರೆ.

## ೮. ಗುರು

ತತ್ತ್ವಮಸಿ ಎಂಬ ಮಹಾವಾಕ್ಯದ ತ್ರಿಪದ ಶೋಧದಲ್ಲಿ **ತತ್** ಅಂದರೆ ಬ್ರಹ್ಮ ಯಾ ದೇವರು ಯಾ ಶ್ರೀರಾಮ, **ತ್ವಂ** ಅಂದರೆ ಜೀವ

ಯೂ ಭಕ್ತ ಇವರಿಬ್ಬರ ಐಕ್ಯ ಅಸಿ ಪದದಲ್ಲಿ. ಅಸಿ ಅಂದರೆ ಆಗಿರುತ್ತಿ ಎಂಬ ಸತ್ತಾಸ್ವರೂಪ. ಅದು ಸದಾಕಾಲ ತ್ರಿಕಾಲಾಬಾಧಿತವಾಗಿರುತ್ತದೆ. ಅದೇ ಗುರುಪದ. ತತ್ ತ್ವಂ ಗುರುಪದದಲ್ಲಿ ಐಕ್ಯ. ದೇವಭಕ್ತರ ಐಕ್ಯ ಗುರುಪದದಲ್ಲಿ. ಇದಕ್ಕೆ ಉದಾಹರಣೆ:—

"ಶಿವರಾಮ ಗುರವೇ ನಮಃ" ಅಂದರೆ ಶಿವ ಎಂಬ ದೇವರು, ರಾಮ ಎಂಬ ಮನುಷ್ಯಧಾರಿ ಶ್ರೀ ರಾಮ ಜೀವ. ಇವರ ಐಕ್ಯ ಸದ್ಗುರುವಾಗಿ ಶ್ರೀ ರಾಮನಿಗೆ ದರ್ಶನಕೊಟ್ಟ ಈಶ್ವರನೇ. ಆಗ ರಾಮನು ತಾನು ಒಬ್ಬ ಭಕ್ತನೆಂತಾಗಲೀ ಶಿವ ದೇವರೆಂತಾಗಲೀ ಮರೆತು ಬ್ರಹ್ಮಸ್ವರೂಪ ಸತ್ತಾಸ್ವರೂಪದಲ್ಲಿ ಲೀನನಾಗಿ, ಜೀವನ್ಮುಕ್ತನಾಗಿ ವಿಹರಿಸುತ್ತಿದ್ದನು.

ಮುಸ್ಲಿಮ್ ಮತದಲ್ಲಿ ಹೇಳುತ್ತದೆ:—

ಲಾಚಾರ ಹೈ ಆಶಿಕ್ । ಮಜಬೂರ್ ಹೈ ಮಾಶುಕ್ ।
ದೊನೊಂಕಾ ಜಾನ ಹೈ ಕಾಸೀದ್ ಕಾ ಹಾತಮೆ ॥ ಅಂದರೆ

ಜೀವನು ನಿರ್ಬಲನು. ದೇವರು ಅಸಹಾಯನಾಗಿ ಇಬ್ಬರ ಪ್ರಾಣವೂ ಗುರುವಿನ ಕೈಯಲ್ಲಿ. ಅಂದರೆ ಗುರುವಿನ ಆಟೋಪದಲ್ಲಿರುತ್ತಾರೆ.

ಈ ಕುರಿತು ಒಂದು ಕಥೆ ಉಂಟು. ಒಂದು ಬ್ರಾಹ್ಮಣ ದಂಪತಿಗಳಿಗೆ ಮಕ್ಕಳಾಗುವ ಪ್ರಾಯ ದಾಟಿತು. ನಿರಾಶೆಯಿಂದ ಪುತ್ರಸಂತತಿ ತನ್ನ ಸೌಭಾಗ್ಯದಲ್ಲುಂಟೋ ಏನೆಂದು ವಿಷ್ಣುವಿನ ಹತ್ತಿರ ಕೇಳು ಎಂತ ಅವರ ನೆರೆಕರೆಯ ಸಾಕ್ಷಾತ್ಕಾರ ಆಗುವ ಭಕ್ತನ ಕೂಡೆ ಹೇಳಿದಾಗ, ಆತನು ಸಾಕ್ಷಾತ್ಕಾರ ಸಮಯ ಕೇಳಿ "ನಿಮ್ಮ ಅದೃಷ್ಟದಲ್ಲಿ ಈ ಜನ್ಮದಲ್ಲಿ ನಿಮಗೆ ಸಂತತಿ ಇಲ್ಲ ಎಂದು ವಿಷ್ಣು ಹೇಳಿದನೆ"ಂದೆನಲು, ಆ ದಂಪತಿಗಳು ವೈರಾಗ್ಯದಿಂದ ನಿರಾಶೆಯಾಗಿ ಯಾತ್ರೆಗೆ ಹೋಗುವುದನ್ನು ಒಬ್ಬ ಸಾಧು ಕಂಡು ಅವರ ದುಃಖದ ಕಾರಣ ತಿಳಿದುಕೊಂಡು, "ನಿಮ್ಮಲ್ಲಿ ಪುತ್ರ ಜನಿಸುತ್ತಾನೆ. ಮನೆಗೆ ವಾಪಾಸು ಹೋಗಿ" ಎಂದು ಹರ್ಷಿಸಿದನು. ಅವರು ಆತನ ಮಾತಿನಲ್ಲಿ ಪೂರ್ಣ ವಿಶ್ವಾಸದಲ್ಲಿದ್ದು ಕೆಲವು ಕಾಲದ ನಂತರ ಅವರಿಗೆ ಸುಪುತ್ರ ಜನಿಸಲು, "ನಿನ್ನ ವಿಷ್ಣುವಿನ ಮಾತು ಸುಳ್ಳಾಯಿತಲ್ಲ" ಎನಲು, ಆ ಭಕ್ತನು ಸಾಕ್ಷಾತ್ಕಾರ ಸಮಯ ವಿಷ್ಣುವಿಗೆ ತಿಳಿಸಲು, ವಿಷ್ಣುವು "ಅದು ಹಾಗಿರಲಿ, ನನ್ನ ಒಂದು ಕೆಲಸಮಾಡು.

ತನ್ನ ಶಿರಸ್ಸು ಪರಮಪದದ ಬದಲಾಗಿ ನನಗೆ ಅರ್ಪಣೆಮಾಡಲಿಕ್ಕೆ ಯಾರಾದರೂ ತಯಾರಿದ್ದರೆ ಅವರಿಗೆ ನನ್ನ ಮುಂದೆ ತಾ" ಎನಲು ಆ ಭಕ್ತನು ತನ್ನ ಸಾವಿರಾರು ಇಷ್ಟ, ಮಿತ್ರ, ಸಂಬಂಧಿಕರಿಗೆಲ್ಲಾ ಬೆಸ ಗೊಳ್ಳಲು, ಒಬ್ಬನಾದರೂ ತಲೆಕೊಡುವುದಕ್ಕೆ ಆಗಲೀ, ಈ ಸಂಸಾರದ ಅನಂತ ಆಶೆಯ ತೃಷ್ಣಾ, ಆಸಕ್ತಿ ಬಿಟ್ಟು ಪರಮಪದಕ್ಕೆ ಹೋಗುವುದಕ್ಕೆ ಸಹಾ ಕಬೂಲಾದವನೊಬ್ಬನಾದರೂ ಆತಗೆ ಸಿಕ್ಕದೆ ನಿರಾಶೆಯಿಂದ ಊರಿನ ಹೊರಗೆ ಹೋಗಲು, ನಮ್ಮ ದಂಪತಿಗಳಿಗೆ ಆಶೀರ್ವದಿಸಿದ ಸಾಧು ಆ ಭಕ್ತನಿಗೆ "ತಾನು ತಯಾರಿದ್ದೇನೆ; ಶಿರಸ್ಸು ಈಗಲೇ ಅರ್ಪಿಸುತ್ತೇನೆ"ಂತ ಉದ್ಯುಕ್ತನಾಗಲು, ಆ ವರ್ತಮಾನ ತಿಳಿಸಿದಲ್ಲಿ ವಿಷ್ಣುವು, "ನಿನ್ನ ಬ್ರಾಹ್ಮಣ ದಂಪತಿಯರ ಅದೃಷ್ಟದಲ್ಲಿ ಸಂತತಿ ಇಲ್ಲ. ಆದರೆ ನಮ್ಮ ಮೂರು ದೇವರಿಗಿಂತ ಶ್ರೇಷ್ಠನಾದ ಗುರುರೂಪವಾದ ಆ ಸಾಧುವಿನ ಮಾತು ತೆಗೆದುಹಾಕಲಿಕ್ಕೆ ನಮಗೆ ಸಾಮರ್ಥ್ಯವಿಲ್ಲದೆ ಅವರಿಗೆ ನಾನೇ ಒಬ್ಬ ಪುತ್ರದಾನ ಮಾಡಿದೆನು ಎಂದನು".

**201.** ಗುರುಶಿಷ್ಯಪಣ ಹೆಂತೊ ಅಧಮಲಕ್ಷಣ
ಭೂತಿಂ ನಾರಾಯಣ ಖರಾ ಆಪತ್ಯೆಸಾಚಿ ದುಸರಾ ॥ —ತುಕಾ.
ಪುರುಷಕೆ ವಿಶೇಷಕರಕೆ ಗುರು ಅಪನಾ ಆತ್ಮಾಹಿಹೈ ॥
ವಿವೇಕಯುಕ್ತಿ ಸ್ವಭಾವೆಂ ಗುರುಭಜಾವೆಂ ನಿಜಬುದ್ಧಿ ।
ಜೊ ನಿಜದೆಹಿಂ ವಿವೇಕು ॥

Guru. Do not entrust yourself to one who "knows not that he knows not" ಅಂದರೆ "ತನಗೇನೂ ಗೊತ್ತಿಲ್ಲ ಎಂದು ಯಾರು ಮನಃಪೂರ್ತಿಯಾಗಿ ತಿಳಕೊಳ್ಳುವದಿಲ್ಲವೋ ಅಂಥವನನ್ನು ಗುರು ಮಾಡಿಕೊಳ್ಳಬೇಡಿ" ಎಂತ ಮಹಾತ್ಮಾ ಗಾಂಧಿ ಯವರು ಹೇಳಿರುತ್ತಾರೆ. —Daily Express, 5-12-28.

ಖರೇ ಜ್ಞಾನಿಯ ಭಾವ ಏನೆಂದರೆ:—

**202.** ನಾಹಂ ಮನ್ಯೆ ಸುವೇದೇತಿ ನೊನವೆದೆತಿ ವೆದಚ ।
ಯೋನಸ್ತದ್ವೆದಸ್ತದ್ವೇದ ನೊನವೆದೆತಿ ವೆದಚ ॥

ಅಂದರೆ ನಾನು ಚೆನ್ನಾಗಿ ಬಲ್ಲೆನೆಂದಾಗಲೀ, ನಾನು ತಿಳಿಯಲಿಲ್ಲವೆಂತಾಗಲೀ ನಾನು ಎಣಿಸುವದಿಲ್ಲ. ಅಂದರೆ ತಿಳಿದಿದ್ದೇನೆ, ತಿಳಿಯಲಿಲ್ಲ ಎಂದು ಯಾವ ಮನಸ್ಸಿನ ಸಂಕಲ್ಪವೋ ಆ ಸಂಕಲ್ಪವೇ ಇಲ್ಲದೆ ನಿಸ್ಸಂಕಲ್ಪನಾದವನೇ ಜ್ಞಾನಿ.

"My conception of Guru is perhaps not of the ordinary. Nothing but perfection will satisfy me. I am in search of one who though in the flesh is incorruptible and unmoved by passion, free from the pairs of opposites, who is truth and ahimsa incarnate, who will therefore fear none and be feared by none. But I must be perfect myself before I meet the Guru inflesh. Till then I must contemplate him in the spirit my path is straight, narrow and like the edge of the sword. I weep when I slip. God's word is "He who strives never perishes."

—Gandhi. The Hindu, 21—6—26.

ಗುರು:—ಶಬ್ದಶಾಸ್ತ್ರಾಂತ ನಿಷ್ಣಾತ, ಸ್ವಾನುಭವಾನೆ ಪರಿಪೂರ್ಣ ಪ್ರಬೋಧ ಶಕ್ತಿನೆ ಸಂಪನ್ನ ದಯಾಳು ವ ಪರಮ ಶಾಂತ ಯಾ ಪಾಂಚಹಿ ಗುಣಾನಿ ಶ್ರೀಗುರುಯುಕ್ತ ಅಸತಾತ. ಜೊ ಆಪಣ ಸ್ವತಃ ಶಾಂತಿ ಸುಖ ಪಾವಲೆನಾಹಿಂತ ತ್ಯಾಂಚಾ ದೇಹನಿರಾಸ ಝಾಲಾ ನಾಹಿಂ. ಜೊ ಸ್ವತಃ ಅಂತರ್ಬಾಹ್ಯ ಹರಿರೂಪ ಝಾಲೆ ನಾಹಿಂತ ತೆ ದುಸರ್ಯಾಲಾ ಕಾಯ ಉದ್ಧರಣಾರ? ತುಕೋಬಾ ಮ್ಹಣತಾತ "ಮಲಾ ಅಶಾ ಕೋಣೆ ಕೃತಾರ್ಥ ಝಾಲೆಲಾ ಮಹಾತ್ಮಾ ಸಾಂಪಡಲಾ ನಾಹಿಂ ಮ್ಹಣೂನ, ಪಾಂಡುರಂಗಾ, ವಿಠತುಝೆಂಚ ಪಾಯ ದೃಢಧರಿಲೆ ಆಹೆತ"

—ಪಾಂಗರಕಾರರ ತುಕಾರಾಮು ಚರಿತ್ರ.

203. ಸದ್ಗುರು ವಾಂಚೊನಿ ಸಾಂಪಡೆನಾ ಸೊಯು । ಧರಾವೆತಿ ಪಾಯು ಆದಿಂ ಆದಿಂ ॥ ೧ ॥ ಆಪಣಾ ಸಾರಿಖಾ ಕರಿತಿ ತತ್ಕಾಲ, ನಾಹಿಂಕಾಲ ವೇಳ ಮಗತಯಾ ॥ ೨ ॥ ಲೋಹ ಪರಿಸಾಚಿ ನ ಸಾಹೆ ಉಪಮಾ । ಸದ್ಗುರು ಮಹಿಮಾ ಅಗಾಧಚಿ ॥ ೩ ॥ ತುಕಾಮ್ಹಣೆ ದೇವಾ, ಅಂಧಳೆ ಹೆಂ ಜನ । ಗೆಲೆ ವಿಸರೂನ ಖರ್ರ್ಯಾ ದೇವಾ ॥ ೪ ॥

204. ಪಾವಾವಯಾಂ ತತ್ವಪಂಚವಿಸಾವೆಂ । ಚೊವ್ವಿಸಾ ಗುರುಂಸಿ ಉಪಾಸಾವೇಂ ವಿವೇಕಯುಕ್ತಿಸ್ವಭಾವೆಂ । ಗುರುಭಜಾವೆಂ, ನಿಜಬುದ್ಧಿ ॥ ಆಪಣಿಯಾಂ ಆಪಣ ಸಾಹ್ಯ ಪಾಹಿಂ । ಜೊ ನಿಜದೇಹಿಂ ವಿವೇಕು. —ಏಕನಾಥಿ.

ದತ್ತಾತ್ರೇಯಜಿ ಕಹತೆಹ್ಯೆಂ, ಮ್ಯೆನೆ ಕಿಸಿ ಏಕ ಮನುಷ್ಯಕೊ ಗುರು ನಹಿಂ ಬನಾಯಾ ಹ್ಯೆ । ಔರ ಮ್ಯೆನೆ ಕಿಸಿ ಕೆ ಕಾನೊಮೆ ಫೂಂಕ ಮರವಾಕರ ಮಂತ್ರಹಿನಲಿಯಾ ಹ್ಯೆ, ಪರಂತು ಜಿಸಸೆ ಗುಣ ಮಿಲಾ ಹ್ಯೆ ಉತನೆ ಗುಣಕಾ ಪ್ರದಾತಾ ಮಾನಕರ ಮ್ಯೆನೆ ಉಸಕೊ ಗುರು ಬನಾಯಾ ಹ್ಯೆ.

—ಅವಧೂತ ಗೀತಾ ಉಪೋದ್ಘಾತ.

## ಚತುರ್ಥ ಪ್ರಕರಣ—ಬ್ರಹ್ಮವಿಚಾರ

### 1. ದೇಹ

205. 1. ಪಾಹತಾಂ ಶರೀರಾಚೆಂ ಮೂಳ । ಯಾ ಐಸೆಂ ನಾಹಿಂ ಅಮಂಗಳ । ರಜಸ್ವಲೆಚಾ ಜೊ ವಿಟಾಳ । ತ್ಯಾ ಮಧ್ಯೆಂ ಜನ್ಮಯಾಸಿ ॥ ೧ ॥ ಅತ್ಯಂತ ದೋಷಾಚಾ ವಿಟಾಳ । ತ್ಯಾ ವಿಟಾಳಾಚಾ ಪುತಳಾ ॥ ೨ ॥ ತೆಥೆಂ ನಿರ್ಮಳಪಣಾಚಾ ಸೊಹಳಾ ಕೆವಿಂ ಘಡೆ ॥ ೩ ॥ ಝಾಲಾರಾವ ಅಥವಾ ರಂಕ ಪೋಟಿಂ ವಿಷ್ಟಾ ಚುಕೆನಾ ॥ ೪ ॥

206. 2. ನಾನಾ ಸುಕೃತಾಂಚೆಂ ಫಳ, ತೊಹಾ ನರದೇಹಕೇವಳ। ತ್ಯಾಹಿ ಮಧ್ಯೆಂ ಭಾಗ್ಯಸಬಳ, ತರೀಚ ಸನ್ಮಾರ್ಗ ಲಾಗೆ। ನರದೇಹಿಂ ವಿಶೇಷ ಬ್ರಾಹ್ಮಣ, ತ್ಯಾಹಿ ವರಿ ಸಂಧ್ಯಾಸ್ನಾನ॥ ಸದ್ವಾಸನಾ ಭಗವದ್ಭಜನ ಘಡೆ ಸರ್ವಪುಣ್ಯೆಂ॥ ಭಗದ್ಭಕ್ತಿ ಹೆ ಉತ್ತಮು, ತ್ಯಾಹಿವರಿ ಸತ್ಸಮಾಗಮು। ಕಾಳ ಸಾರ್ಥಕ ಹಾಚಿ ಪರಮು ಲಾಭ ಜಾಣಾವಾ॥ ನರದೇಹಾಚೆಂ ಉಚಿತ ಕಾಹಿಂ ಕರಾವೆಂ ಆತ್ಮಹಿತ. —ರಾಮದಾಸ ಸಮರ್ಥ.

207. 3. ನರದೇಹಾ ಐಸೆಂ ವೊಖಟೆಂ ಪೃಥ್ವಿ ಮಾಜಿ ನಾಹಿಂ ಕೋಠೆಂ। ದೇಹಾ ಐಸೆಂ ಗೋಮಟೆಂ ಪಾಹತಾಂ ನ ಭೇಟಿ ತ್ರೈಲೋಕಿಂ॥ ೧॥ ವೊಖಟೆಂ ಮ್ಹಣೊನಿ ತ್ಯಾಗಾವೆಂ ತ್ರೆಂ ಮೋಕ್ಷಸುಖಾಸಿ ನಾಗವಾವೆಂ। ಹೊಕಾಂ ಗೋಮಟೆಂ ಮಣ್ಹೊನಿ ಭೋಗವೆಂ ತ್ರೆಂ ಅವಶ್ಯಜಾವೆಂ ನರಕಾಸಿ ॥ ೨॥ ವಿವೇಕ ವೈರಾಗ್ಯ ಪ್ರಾಪ್ತಿ ನಿಜಯುಕ್ತಿ ನರದೇಹಿಂ.

208. 4. ವಿವೇಕ ವೈರಾಗ್ಯ ಃ ವಿಚಾರು ನರದೇಹಿಂ ಉಭೆಸದರು। ಯಾ ಲಾಗಿಂ ಮುಖ್ಯ ಗುರು ನರದೇಹಾ॥ ದೇಹಾಸಿ ಉಪಭೋಗ ಸಾಧನೆಂ ತಿತುಕೆಂ ಜಾಣಪಾಂ ಬಂಧನೆಂ॥ ನರದೇಹೆಂ ಸಾಧೆ ಬ್ರಹ್ಮಜ್ಞಾನ। —ಏಕನಾಥ.

5. ಶರೀರವೊಖಟೆಂ ನಾ ಚಾಂಗ, ತುಕಾ ಮ್ಹಣೆ ವೆಗಕರಿ ಹರಿ ಭಜನೆ॥ **ದೇಹ** ಶಬ್ದಾಚಿ ವ್ಯುತ್ಪತ್ತಿ ಐಸಿ, "ದಹ್ಯತೆ ತ್ರಿವಿಧ ತಾಪೈಸ್ತದ್ದೇಹ" ಇತಿ

**ಜೀವನ ಶರೀರಗಳು:**—ಸ್ಥೂಲ, ಸೂಕ್ಷ್ಮ,ಕಾರಣ, ಮಹಾಕಾರಣ.

1. **ಸ್ಥೂಲ ಶರೀರ**—ತ್ವಕ್ ಚರ್ಮ ನಖ ಮಾಂಸ, ರೋಮಾಂಗುಲ್ಯಂ ಗುಷ್ಟ ಇತ್ಯಾದಿ—ಆತ್ಮೋಪನಿಷತ್.

[11ನೇ ಶ್ಲೋಕ ನೋಡಿ.]

2. **ಸೂಕ್ಷ್ಮ ದೇಹ**—ಯಾ **ಲಿಂಗದೇಹಃ**—ಬುದ್ಧಿ, ಕರ್ಮೇಂದ್ರಿಯ,

ಪ್ರಾಣಪಂಚಕೈರ್ಶ್ನ ಮನಸಾಧಿಯಾ । ಶರೀರಂ
ಸಪ್ತದಶಭಿಸ್ಸೂಕ್ಷ್ಮಂತಲ್ಲಿಂಗಮುಚ್ಯತೆ ॥

**3. ಕಾರಣ ಶರೀರ**—ಅಹಂಕಾರ ಚಿತ್ತಕೂಡಿ ಸೂಕ್ಷ್ಮದಲ್ಲಿರುವದು ಇದು ಸಕಲಕ್ಕೂ ಆಧಾರ.

**4. ಮಹಾಕಾರಣ**—ಇದು ಕಾರಣದಲ್ಲಿರುವದು. ಪರಮಾನಂದ ಭೋಗ. ಪರವಾಚಾ **ಪಂಚಭೂತಗಳೂ** (=ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಈಶಾನ), **ಪಂಚವಿಷಯಗಳೂ** (=ಶಾಂತಿ, ವಿದ್ಯಾ, ಪ್ರತಿಷ್ಠಾ, ನಿವೃತ್ತಿ, ಶಾಂತ್ಯಾತೀತ), **ಪಂಚಪ್ರಾಣಗಳೂ** (ಆದಿಶಕ್ತಿ, ಪರಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ), **ಪಂಚೇಂದ್ರಿಯಗಳೂ** (=ಅ, ಉ, ಮ, ಮಾತ್ರ, ಬಿಂದು), **ಪಂಚಕರಣಗಳೂ** (=ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ) ಕೂಡಿ ಮಹಾಕರಣ ಶರೀರ.

**ಸ್ಥೂಲದ ಲಕ್ಷಣ** — ಜಾಗ್ರದಾವಸ್ಥೆ. **ವಿಶ್ವಾಭಿಮಾನ** ದೇವತೆ. ಕ್ರಿಯಾಶಕ್ತಿ ಅನ್ನಮಯ. ವ್ಯವಹಾರಿಕ ಜೀವ. ನೇತ್ರ ಸ್ಥಾನ.

**ಸೂಕ್ಷ್ಮದ ಲಕ್ಷಣ**—ಸ್ವಪ್ನಾವಸ್ಥೆ, ಕಂಠಸ್ಥಾನ, ಇಚ್ಛಾಶಕ್ತಿ, **ತೈಜಸ ಅಭಿಮಾನ** ದೇವತಾ. ವಿಜ್ಞಾನಮಯ, ಮನೋಮಯ, ಪ್ರಾಣಮಯ ಕೋಶಗಳು.

**ಕಾರಣದ ಲಕ್ಷಣ** — ಸುಷುಪ್ತ್ಯಾವಸ್ಥಾ, ಹೃದಯಸ್ಥಾನ, ಪ್ರಾಜ್ಞ ಅಭಿಮಾನ ದೇವತಾ, ಆನಂದಭೋಗ, ಆನಂದಮಯ ಕೋಶ.

**ಮಹಾಕಾರಣದ ಲಕ್ಷಣ**—ತೂರ್ಯಾವಸ್ಥೆ, **ಪ್ರತ್ಯಗಾತ್ಮಾ** ಅಭಿಮಾನ ದೇವತಾ. ಆದಿಶಕ್ತಿ, ಮೂರ್ಧ್ನಿಸ್ಥಾನ, ಶುದ್ಧಸತ್ವಗುಣ,

ಆನಂದಭೋಗ, ಅರ್ಧಮಾತ್ರ. ವ್ಯಾಪಕ ನಿರ್ಮಲಾತ್ಮ. (ಕೂಟಸ್ಥ ಚೈತನ್ಯನು)

— ಜ್ಞಾನಸಿಂಧು.

**ಪೂರ್ವಾಷ್ಟಕ=** ಬುದ್ಧಿ, ಮನ, ಅಹಂಕಾರ, ತನ್ಮಾತ್ರಾ. ಇಹ ಅಂತವಾಹಕ ದೇಹವೈ ಯೊ. ವಾ. =ಸೂಕ್ಷ್ಮ ಶರೀರ of 5 ಜ್ಞಾನೇಂದ್ರಿಯ+ಮನ+ಬುದ್ಧಿ+ಅಹಂಕಾರ.

**ಷಡೂರ್ಮಿ** ಕ್ಷುಧಾ, ತೃಷಾ, ದುಃಖ (=delusion), ಸುಖ (delusion), ಜನ್ಮ, ಮರಣ ಇದಕ್ಕೆ ಷಡ್ಗುಣ ಅನ್ನುತ್ತಾರೆ.

**ಅಷ್ಟಧಾ ಪ್ರಕೃತಿ=** ದೃಶ್ಯ=ಚೈತ್ಯ=ಪಂಚಭೂತ+ತ್ರಿಗುಣ.

**ಪಂಚಕೋಶಗಳು:—**

1. ಅನ್ನಮಯ ಕೋಶ:—ಪಂಚೀಕೃತ ಪಂಚ ಮಹಾಭೂತಗಳಿಂದ ಅಂದರೆ ಸ್ಥೂಲಭೂತಗಳಿಂದ ಹುಟ್ಟಿದ್ದು. ಅನ್ನಮಯ ಸ್ಥೂಲ ದೇಹದಲ್ಲಿ ಲಿಂಗದೇಹ ಇರುವದು.

2. **ಪ್ರಾಣಮಯ ಕೋಶ=5 ಕರ್ಮೇಂದ್ರಿಯ+5 ವಾಯು.**

3. **ಮನೋಮಯ=5 ಜ್ಞಾನೇಂದ್ರಿಯ+ಮನ.**

4. ವಿಜ್ಞಾನಮಯ=5 ಜ್ಞಾನೇಂದ್ರಿಯ+ಬುದ್ಧಿ.

5 ಆನಂದಮಯ=ಕಾರಣಶರೀರರೂಪವಾದ ಅವಿದ್ಯೆಯಲ್ಲಿರುವ ಬುದ್ಧಿ ಮಲೀನ ಸತ್ವಗುಣದ್ದು. ಅದು ಪ್ರಿಯ, ಮೋದ, ಪ್ರಮೋದ ಎಂಬ ಸುಖ ವಿಶೇಷ ವೃತ್ತಿಗಳೊಡನೆ ಕೂಡಿರುವಂಥಾದ್ದು. ಪ್ರಾಣಮಯ ಕೋಶ ಅನ್ನಪಾನ ಹಂಚಿ ದೇಹ ಬೆಳಿಸುವದು, ಮನೋಮಯ ಕೋಶ ವಿಷಯಗಳನ್ನವಲೋಕಿಸಿ ಸಂಶಯಪಡುತ್ತಾ ಸುಖದುಃಖ ಇಚ್ಛಾ ಶಕ್ತಿರೂಪದಿಂದಿರುವದೇ.

ವಿಜ್ಞಾನಮಯ ಕೋಶ—ಕರ್ತೃತ್ವ ಭೋಕ್ತೃತ್ವ ಧರ್ಮ. ಪರಲೋಕ ಗಮನಾಗಮನ ಇದರ ಧರ್ಮ. ಊಹೆಯಿಂದ ನಿಶ್ಚಯಿಸುವದೇ ಇದರ ಸಾಮರ್ಥ್ಯ.

## ೨. ದೇವಾಲಯ

209. ದೇಹೋ ದೇವಾಲಯಂ ಪ್ರೋಕ್ತೋ ದೇಹಿ ದೇವೋ ನಿರಂಜನಃ
ಅರ್ಚಿತಸ್ಸರ್ವಭಾವೇನ । ಸ್ವಾನುಭೂತ್ಯಾ ವಿರಾಜತೆ ॥

ನರದೇಹಕ್ಕೆ ನಾಲ್ಕು ಶರೀರಗಳು—ಸ್ಥೂಲ, ಸೂಕ್ಷ್ಮ, ಕಾರಣ ಮತ್ತು ಮಹಾಕಾರಣ.

ಹೀಗೆಯೇ ಕಲ್ಲು, ಮಣ್ಣಿನಿಂದ ನಿರ್ಮಿತ ದೇವಸ್ಥಾನಗಳಿಗೂ ನಾಲ್ಕು ಸುತ್ತುಗಳು (temple squares) ಇರುತ್ತವೆ.

**1ನೇ ಬಾಗಿಲು:**—ಇದಕ್ಕೆ ಹೆಬ್ಬಾಗಿಲು ಎನ್ನುತ್ತಾರೆ. ಇದರ ಹತ್ತಿರ ಏರಲಿಕ್ಕೆ ಏಳು ಮೆಟ್ಟಲುಗಳುಂಟು. ಅವು ಸಪ್ತಜ್ಞಾನ ಭೂಮಿಕೆಗಳು (ಅವು ಯಾವುವೆಂದರೆ, 1. ಶುಭೇಚ್ಛಾ (ardour), 2. ವಿಚಾರಣಾ (spirit of enquiry), 3. ತನುಮಾನಸಾ (attenuation), 4. ಸತ್ವಾಪತ್ತಿ (attainment of purity). 5. ಅಸಂಸಕ್ತಿ (indifference), 6. ಪದಾರ್ಥಾಭಾವಿನಿ (oblivion) 7. ತುರೀಯ (transcendence of 4, 5, 6), ಈ ಮೆಟ್ಟಲುಗಳ ಎಡಬಲಕ್ಕೆ 4 ಫೀಟು ಎತ್ತರ, 2 ಮಾರು ಉದ್ದ ಶಿಲೆಕಲ್ಲುಗಳೆರಡು ಇವೆ. ಅವುಗಳಲ್ಲಿ ಆನೆಯ ಸೊಂಡಿಲು ಸುತ್ತಿ ಇದ್ದ ಆನೆಯ ತಲೆ ಸಿಂಹದ ಬಾಯಿಯಲ್ಲಿ ಉಂಟು. ಕೆಲವು ದೇವಸ್ಥಾನಗಳಲ್ಲಿ ಸಿಂಹದ ಮುಖ ಬಾಗಿಲಿನ ಮೇಲ್ಭಾಗದ ಹೊಸ್ತಿಲಲ್ಲಿರುತ್ತದೆ. ಅದಕ್ಕೆ ಕೀರ್ತಿ ಮುಖ ಅನ್ನುತ್ತಾರೆ. ಆದ್ದರಿಂದ ಆ ಹೊರ ಹೆಬ್ಬಾಗಿಲಿಗೆ ಸಿಂಹದ್ವಾರ ಎಂತಲೂ, ಆನೆಬಾಗಿಲು ಎಂತಲೂ ಹೇಳುತ್ತಾರೆ—ಇದರ ಅಂತರಾರ್ಥ ಏನೆಂದರೆ, ಪಂಚ ವಿಷಯಗಳನ್ನು ನಿದರ್ಶಿಸಲಿಕ್ಕೆ ಆ ವಿಷಯಗಳಿಗೆ ಬಲಿಬೀಳುವ ಮಾತಂಗ, ಪತಂಗ, ಕುರಂಗ, ಭೃಂಗ, ಮೀನ ಎಂಬ ಐದು ಪ್ರಾಣಿಗಳ ಸಂಜ್ಞೆ ಸೂಚಕವಾಗಿಡುತ್ತಾರೆ. ಷಡ್ವೈರಿಗಳ ಪೈಕಿ ಕಾಮ ಅತಿ ಶ್ರೇಷ್ಠ. ಅದು ಇದ್ದರೇನೇ ಬಾಕಿ ಷಡ್ವೈರಿಗಳಾದ ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಉದ್ಭವಿಸುತ್ತವೆ. ಆ ಕಾಮವನ್ನು ನಿದರ್ಶಿಸಲಿಕ್ಕೆ ಆನೆಯೇ ಪ್ರಮುಖ. ಕಾಡಿನಲ್ಲಿ ಕೃತ್ರಿಮ

ಹೆಣ್ಣಾನೆ ನಿರ್ಮಾಣಮಾಡಿ ಅದರ ಮುಂದೆ ಕಂತವಾದ ದೊಡ್ಡ ಹೊಂಡ ಅಗೆದು ಅದನ್ನು ಶಿಕಾರಿಗಳು ಅತಿ ತೆಳ್ಳಗಿರುವ ಹಲಿಗೆ, ಮಡ್ಲುಗಳಿಂದ ಮುಚ್ಚುತ್ತಾರೆ. ಮದೋನ್ಮತ್ತ ಗಂಡಾನೆಯು ಆ ಹೆಣ್ಣಾನೆಯನ್ನು ಕೂಡುವುದಕ್ಕೆ ಓಡಿಬಂದು ಆ ಹೊಂಡಕ್ಕೆ ಬೀಳುತ್ತದೆ ಮತ್ತು ಬಂಧನೆಗೆ ಈಡಾಗುತ್ತದೆ. ಆನೆಯ ವೈರಿ ಸಿಂಹ, ಸಿಂಹ ಇದ್ದ ಕಾಡಿನಲ್ಲಿ ಆನೆಗೆ ಮದ ಬರುವುದಿಲ್ಲ; ಮಾತ್ರವಲ್ಲ, ಆನೆಗೆ ಸಿಂಹದ ಸ್ವಪ್ನ ಬಿದ್ದರೆ ಆನೆ ಸಾಯುತ್ತದೆಂತ ಲೋಕರೂಢಿ ಮಾತು ಉಂಟು. ಆದ್ದರಿಂದ ಆ ಆನೆಯು ತಲೆ, ಸೊಂಡಿಲು ಸಮೇತ ಸಿಂಹದ ಮುಖದಲ್ಲಿದ್ದಂತೆ ನಮೂದಿಸುತ್ತಾರೆ. ಇದಕ್ಕೆ ಸರಿಯಾಗಿ ನಿವೃತ್ತಿನಾಥನ ದ್ವಾದಶಾಕ್ಷರೀ ಅಭಂಗದಲ್ಲಿ—

"ವನಿಂ ಸಿಂಹವಸತಾಂ ಗಜಿಂ ಮದುಕೆಂವಿಧರಾವಾ" ಎಂತಲೂ "ವದನಿಂ ಹರಿ ಉಚ್ಚಾರಿ ತೆಣೆ ಸಂಸಾರ ಕೆಂವಿ ಭುಂಜಾವಾ" ಎಂತ ಸಹಾ ಹೇಳಿರುತ್ತದೆ. ಅಂದರೆ, ಸಿಂಹ ಇರುವ ಕಾಡಿನಲ್ಲಿ ಆನೆಗೆ ಮದ ಎಂದಿಗೂ ಬರಲಿಕ್ಕಿಲ್ಲ. ಹಾಗೆಯೇ ಬಾಯಿಯಲ್ಲಿ ಯಾವಾಗಲೂ "ಹರಿ ಹರಿ" ಎಂದು ನಾಮಸ್ಮರಣೆ ಇರುವ ಮನುಷ್ಯನು ಸಂಸಾರ ಭೋಗಗಳಲ್ಲಿ ಎಂದೆಂದಿಗೂ ಆಸಕ್ತನಾಗಲಿಕ್ಕಿಲ್ಲ", ಹೀಗೆ ಆ ಹೊರಗಿನ 1ನೇ ಸುತ್ತಿನ ಬಾಗಿಲು ತೆರೆದು ನಮಗೆ ಒಳಗೆ ಬಿಡಬೇಕಾದರೆ ನಾವು ಕಾಮಕ್ರೋಧಾದಿ ಷಡ್ವೈರಿಗಳನ್ನು ನಾಮಸ್ಮರಣೆಯ ತೀವ್ರತೆಯಿಂದ ಗೆಲ್ಲ ಬೇಕು. ಇದಕ್ಕೆ ಸರಿಯಾಗಿ ಪುರಾಣದಲ್ಲಿ 1. ಅನ್ನಮದ, 2. ಅರ್ಥ ಮದ, 3. ಯೌವನಮದ, 4. ಸ್ತ್ರೀಮದ, 5. ವಿದ್ಯಾಮದ, 6. ಕುಲ ಮದ, 7. ರೂಪಮದ ಮತ್ತು 8. ಉದ್ಯೋಗಮದ ಎಂಬ ಅಷ್ಟಮದ ಗಳಿಂದ ಸೊಕ್ಕಿದ ಹಿರಣ್ಯಕಶಿಪು ವಿಷ್ಣು ಮತ್ತು ವೈಷ್ಣವ ಭಕ್ತರ ದ್ವೇಷ ಸಾಧಿಸಿ ಅಧರ್ಮ ಹೆಚ್ಚಾಗಲು, ವಿಷ್ಣು ನರಸಿಂಹಾವತಾರ ತಾಳಿ ಅವನಿಗೆ ಸಂಹಾರ ಮಾಡಿದನು ಎಂದು ಹೇಳಿಯದೆ. ಹೀಗೆ ಇಂದ್ರಿಯನಿಗ್ರಹ ಯಾನೆ ಷಟ್ಸಂಪತ್ತಿಯ ಪೈಕಿ ದಮ ಪ್ರಾಪ್ತ ಆದ ನಂತರ 4ನೇ ಸುತ್ತಿನ ಒಳಗೆ ಬಿಡುತ್ತಾರೆ. ಅಂದರೆ ಸ್ಥೂಲದೇಹ ಉಲ್ಲಂಘನೆಮಾಡಿದಂತಾ ಯಿತು. ಈ 4ನೇ ಸುತ್ತಿನಲ್ಲಿ ಒಂದು ಬಾಗಿಲು ಉಂಟು.

**2ನೇ ಬಾಗಿಲು:—** ಈ ಬಾಗಿಲಿನ ಮೇಲಿನ ಹೊಸ್ತಿಲಲ್ಲಿ ಲಕ್ಷ್ಮೀ ಯಾ ಓಂಕಾರ ಮತ್ತು ಅದರ ಎಡಬಲಕ್ಕೆ ಶಂಖ ಚಕ್ರದ ಚಿತ್ರ ಉಂಟು. ಅದರ ಅರ್ಥ ಏನೆಂದರೆ, ಸೃಷ್ಟಿಯ ಆದಿಯಲ್ಲಿ ಓಂಕಾರ ಉದ್ಭವಿಸಿ ಅದರಿಂದ ಪ್ರಕಾಶ ಮತ್ತು ಶಬ್ದ ಹೊರಡುತ್ತವೆ. ಇದರಿಂದ ನಾಮರೂಪಾತ್ಮಕ ಇಡೀ ಸೃಷ್ಟಿ ವ್ಯಕ್ತವಾಗುತ್ತದೆ. ಸಚ್ಚಿದಾನಂದ (ಬ್ರಹ್ಮ) ಸ್ವರೂಪದ ಚಿತ್ ಪದದಲ್ಲಿ ಸ್ಫುರಣ, ಸಂವೇದನ ಯಾ ಸ್ಪಂದನ (vibration) ಶುರುವಾಗಿ ಓಂಕಾರದಿಂದ ಅ, ಉ, ಮ ಎಂಬ ಅಕ್ಷರಗಳು ಹೊರಟು, ಅ ಎಂಬುದು ಕಂಠದಲ್ಲಿ, ಉ ಎಂಬುದು ತುಟಿಯಲ್ಲಿ, ಮ್ ಎಂಬುದು ತುಟಿ ಬಂದ್‌ಮಾಡುತ್ತದೆ. ಹೀಗೆ ಓಂಕಾರದ ವ್ಯಾಪ್ತಿಯು ಇಡೀ (sounding board) ವೈಖರಿ ವಾಚೆಗೆ ಹರಡುತ್ತದೆ. ಅಕ್ಷರಮಾಲೆಯ ಶುರು "ಅ" ಆಖೈರಿ "ಮ" ಈ ಅಕ್ಷರಮಾಲೆಯ ಅಕ್ಷರಗಳನ್ನು ಕೂಡಿಸಿ ಶಬ್ದಗಳು, ಶಬ್ದಗಳಿಂದ ವಾಕ್ಯಗಳು, ಹೀಗೆ ಶಬ್ದಗಳಿಂದ ಅರ್ಥ, ನಂತರ ಅರ್ಥಕ್ಕೆ ಸರಿಯಾಗಿ ವ್ಯಕ್ತಿಗಳಾದ ಸ್ಥಿರ ಚರ ಪ್ರಾಣಿಗಳೆಲ್ಲಾ ಆಕಾರಕ್ಕೆ ಬಂದು ಇಡೀ ಸೃಷ್ಟಿಯು ನಾಮ + ರೂಪ + ಸತ್ + ಚಿತ್ + ಆನಂದಯುಕ್ತವಾಗಿ ಪಂಚಭೂತಾತ್ಮಕ ಇಡೀ ಸಂಸಾರ ವ್ಯಕ್ತವಾಗುತ್ತದೆ. ಓಂ ಎಂಬ ಶಕ್ತಿ ಯಾ ಮಾಯಾ ಯಾ ಲಕ್ಷ್ಮಿ. ನಮ್ಮ ಸ್ವರೂಪ ಸಚ್ಚಿದಾನಂದ. ಚಿತ್ (absolute consciousness) ಎಂಬುದು ಸ್ವಾಭಾವಿಕವಾಗಿ (inherently) ಸ್ಥಿರ ಅಥವಾ ಅಸ್ಥಿರ ಯಾ ನಿಶ್ಚಲ ಯಾ ಚಂಚಲ ವಾಗುತ್ತದೆ. "ಚಿತ್ತೆಚಲತಿ ಸಂಸಾರೆ। ನಿಶ್ಚಲೆ ಮೋಕ್ಷ ಉಚ್ಯತೆ" ಈ ಜ್ಞಾನ ಎಲ್ಲಾ ಆ ಬಾಗಿಲ ಮೇಲಣ ಚಿತ್ರದಿಂದ ತಿಳಿದುಕೊಂಡಲ್ಲಿ ಸೂಕ್ಷ್ಮ ದೇಹನಿರಸನದಿಂದ ನಮಗೆ 3ನೇ ಸುತ್ತಿಗೆ ಆ ಬಾಗಿಲು ತೆರೆದುಬಿಡುತ್ತಾರೆ. ಅಲ್ಲಿ ಇನ್ನೊಂದು ಬಾಗಿಲು ಉಂಟು.

**3ನೇ ಬಾಗಿಲು:—** ಅದರ ಮುಂದೆ ಗರುಡ, ಹನುಮಂತರೆಂಬ ಇಬ್ಬರು ದ್ವಾರಪಾಲಕರಿದ್ದಾರೆ. ಗರುಡ ವಿಷ್ಣುವಿನ ವಾಹನವಾದ ಚಿತ್ತ, ಹನುಮಂತ ಶ್ರೀರಾಮನ ಪ್ರತಾಪಿ ಭಕ್ತ ಮುಖ್ಯಪ್ರಾಣ. ಅವರಿಗೆ ಗೆದ್ದರೆ ಮಾತ್ರ 3ನೇ ಸುತ್ತಿಗೆ ನಮಗೆ ಅವರು ಬಿಡುತ್ತಾರೆ. ಹಾಗೆಯೇ ಪ್ರಾಣಾ

ಯಾವುದಿಂದ ಚಿತ್ತವೃತ್ತಿನಿರೋಧ ಯಾ ಯೋಗ ಸಾಧಿಸಿದಲ್ಲಿ 3ನೇ ಸುತ್ತಿಗೆ ಕಾರಣ ಎಂಬ ಅಜ್ಞಾನ, ನಿದ್ರೆಯ ದೇಹ ನಾಪ್ರ ದಾಟಿ ಆತ್ಮನಿವೇದನದಿಂದ ಜ್ಞಾನದ ಸುತ್ತಿನೊಳಗೆ ಹೋಗುತ್ತೇವೆ. ಅಲ್ಲಿ ಒಂದು ಬಾಗಿಲುಉಂಟು.

**4ನೇ ಬಾಗಿಲು.** ಆ ಬಾಗಿಲಿನ ಎಡಬಲಕ್ಕೆ ಜಯವಿಜಯರೆಂಬ ದ್ವಾರಪಾಲಕರಿದ್ದಾರೆ. ಅದರ ಅರ್ಥ ಜೀವ, ಶಿವ ಎಂತ. 3ನೇ ಸುತ್ತಿನ ಆತ್ಮನಿವೇದನ ಆದಲ್ಲಿ ದೇವಭಕ್ತನೆಂಬ ಭೇದ ಇರುತ್ತದೆ. ಅದು ಸಹಾ ಹೋಗಿ ಕೇವಲ ಅದ್ವೈತ ಸಿದ್ಧಿಯಾಗಿ, ತಾನು ಸಾಕ್ಷಿರೂಪನಾಗಿ ನೋಡುತ್ತೇನೆಂಬ ಮಹಾಕಾರಣದ ಧರ್ಮ ಸಹಾ ತ್ಯಾಗಮಾಡಿ ಬ್ರಹ್ಮಸ್ವರೂಪದಲ್ಲಿ ಲೀನವಾದಲ್ಲಿ 4ನೇ ಬಾಗಿಲು ತೆರೆದು ಗರ್ಭಗುಡಿಗೆ ಪ್ರವೇಶಿಸಿ ಅಭಿನ್ನ ಐಕ್ಯಜ್ಞಾನವಾದ ವಿಜ್ಞಾನದಿಂದ ಜೀವನ್ಮುಕ್ತನಾಗುತ್ತಾನೆ. ಈ ಗರ್ಭಗುಡಿಗೆ ಬರುವಾಗ 1. ಶಾಸ್ತ್ರಜ್ಞಾನ ಯಾ ಶಾಸ್ತ್ರಾಭ್ಯಾಸ. 2. ನಿರ್ವಿಕಲ್ಪ ಸಮಾಧಿ ಯಾ ಮನೋಲಯ ಮತ್ತು 3. ವಾಸನಾಕ್ಷಯ ಆದರೆ ಮಾತ್ರ ಜೀವನ್ಮುಕ್ತನಾಗುತ್ತಾನೆ. ಇದೇ ಬ್ರಹ್ಮಸಾಕ್ಷಾತ್ಕಾರ.

ಹೀಗೆ ದೇವಸ್ಥಾನದ 4 ಸುತ್ತುಗಳು ಮನುಷ್ಯನ 4 ದೇಹಗಳಿಗೆ ಸರಿಹೋಲುತ್ತವೆ. ಪ್ರಥಮ ಸುತ್ತಿನಲ್ಲಿ ನಮ್ಮಲ್ಲಿರುವ ತಾಮಸ, ತಮೋಗುಣ ಎಂಬ ಮೃಗದ ದೇಹಬುದ್ಧಿನಾಶಮಾಡಿ, ದ್ವಿತೀಯ ಸುತ್ತಿನಲ್ಲಿ ರಜೋಗುಣದ ಮನುಷ್ಯನನ್ನು ಗೆದ್ದು, 3ನೇ ಸುತ್ತಿನಲ್ಲಿ ಸತ್ವಗುಣದ ತಾನು ಶಿವನೆಂಬ ಭಾವನೆಯನ್ನು ಸಹಾ ಗೆದ್ದು, 4ನೇ ಸುತ್ತಿನಲ್ಲಿ ನಿಸ್ತ್ರೈಗುಣ್ಯನಾಗಿ. ಜೀವನ್ಮುಕ್ತನಾಗಿ ದೇಹ ಪ್ರಾರಬ್ಧಾನುಸಾರ ಬೀಳುವ ವರೆಗೆ ಮಾಡುವ ಕರ್ಮಗಳಿಗೆಲ್ಲಾ ಮನ, ಬುದ್ಧಿ, ಚಿತ್ತ, ಅಹಂಕಾರ, ಜ್ಞಾನೇಂದ್ರಿಯ, ಕರ್ಮೇಂದ್ರಿಯಗಳ ಎಲ್ಲಾ ವೃತ್ತಿಗೆ ವಿರಹಿತನಾಗಿ ಆತ್ಮಸ್ವರೂಪದಲ್ಲೇ ಲೀನನಾಗುತ್ತಾನೆ. ಇದೇ ಅವಧೂತಸ್ವರೂಪ, ಆತ ಅತ್ಯಾಶ್ರಮಿ.

ಯೋಗದ ದಶನಾದಗಳಿಗೆ ಸರಿಯಾಗಿ ದೇವಸ್ಥಾನಗಳಲ್ಲಿ 1. ತಾಳ, 2. ಶಿಂಗಿ, 3. ತಂಬೂರು, 4. ಝಾಂಜ, 5. ಘಂಟೆಗಳು, 6. ಕಹಳೆ, 7. ಶಂಖ, 8. ನಗಾರಿ, 10. ವೇದಮಂತ್ರಗಳುಂಟು. ಇವುಗಳಿಂದ

ಯೋಗದ ದಶನಾದಗಳು: 1. ಚಿಣ್ಚಿಣಿ, 2. ಶಿಂಗೀನಾದ, 3. ತಂತ್ರೀ ನಾದ, 4. ತಾಳನಾದ, 5. ಸುಸ್ವರ (ಓಂಕಾರದ)ನಾದ, 6. ಗರ್ಜನಾದ, 7. ಶಂಖನಾದ, 8. ಮೇಘನಾದ, 9. ಭೇರೀನಾದ ಮತ್ತು 10. ವೇದ ಘೋಷ ಇವೆ. ಭಕ್ತರು ದೇವಸ್ಥಾನದೊಳಗೆ ಪ್ರವೇಶಿಸಿದ ಕೂಡಲೇ ಘಂಟೆಯಲ್ಲಿ ಒಂದು ಪೆಟ್ಟು ಹೊಡೆಯುತ್ತಾರೆ. ಅದು ಓಂ ಎಂಬ ಶಬ್ದದಿಂದ ಬ್ರಹ್ಮವನ್ನು ನಿದರ್ಶಿಸುತ್ತದೆ.

ಭಕ್ತರು ದೇವಸ್ಥಾನಕ್ಕೆ ಬರುವಾಗ 5 ಯಾ 10 ಬಾಳೆಹಣ್ಣು ಮತ್ತು ತೆಂಗಿನಕಾಯಿ ತರುತ್ತಾರೆ. ಬಾಳೆಹಣ್ಣುಗಳು ಕೈಬೆರಳುಗಳನ್ನು ಸೂಚಿಸಿ ಕರ್ಮಮಾಡುವ ಕೈಯನ್ನು ನಿದರ್ಶಿಸುತ್ತದೆ. ತೆಂಗಿನಕಾಯಿಗೆ 2 ಕಣ್ಣು, ಒಂದು ಮುಖದಂತೆ ಉಂಟು. ಅದು ಕರ್ಮಪ್ರೇರಿಸುವ ತಲೆ ನಿದರ್ಶಿಸುತ್ತದೆ. ತಲೆ ಮತ್ತು ಕೈಗಳನ್ನು ದೇವರಿಗೆ ಅರ್ಪಿಸಿ, ತನ್ನ ಕರ್ಮ ಗಳನ್ನು ಮಾಡಲಿಕ್ಕೆ ಪ್ರೇರಿಸುವ ಸಂಕಲ್ಪವಿಕಲ್ಪಗಳು ಮತ್ತು ಆ ಸಂಕಲ್ಪ ಗಳಿಗನುಸಾರ ಕರ್ಮಮಾಡುವ ಕೈಗಳು "ಇಂದಿನಿಂದ ನಿನ್ನದೇ, ದೇವರೇ" ಎಂದು ದೇವರಿಗೆ ಅರ್ಪಣೆಮಾಡಿ ನಿಸ್ಸಂಕಲ್ಪ, ನಿರ್ವಿಕಲ್ಪ, ನಿಸ್ಸಂಶಯ ಆಗಿ "ಸರ್ವಭೂತಿಂ ಭಗವದ್ಭಾವ'ದಿಂದ ಕರ್ಮಗಳೆಲ್ಲಾ ಬ್ರಹ್ಮಾರ್ಪಣೆ ಮಾಡಿದ ಸಹಜ ಕರ್ಮಗಳಾಗುತ್ತವೆ. ಇದಕ್ಕೇನೇ ಭಜನಭಾವ ಎನ್ನುತ್ತಾರೆ.

ದೇವಸ್ಥಾನಕ್ಕೆ ಬರುವಾಗ ಆರತಿಗಳನ್ನು ತರುತ್ತಾರೆ. 3 ತರದ ಆರತಿಗಳುಂಟು. 1. ಹರಿವಾಣಕ್ಕೆ ಕೆಲವು ಬತ್ತಿಗಳನ್ನಿಟ್ಟು ಎಣ್ಣೆಹಾಕಿ ದೇವರ ಮುಂದೆ ಅಗ್ನಿಹಚ್ಚಿ ಉವ್ವಾಳಿಸುವದು. 2. ಒಂದು ಹರಿವಾಣ ದಲ್ಲಿ 5 ಒಂದು ಇಂಚು ಉದ್ದದ ಸಣ್ಣ ನಿರಾಂಜನಗಳಲ್ಲಿ ಎಣ್ಣೆ ಮತ್ತು ಬತ್ತಿಹಾಕುವ ಆರತಿ. 3. ಕಾಂಕಡ್ಯಾ ಆರತಿ, ಕಾಂಕಡಾ ಅಂದರೆ ಮರಾಠಿ ಭಾಷೆಯಿಂದ ವಸ್ತ್ರ ಸುತ್ತಿಮಾಡಿದ ದೊಡ್ಡ ಬತ್ತಿ; ಧೊಂದಿ ಎಂತ ಕೊಂಕಣಿ ಭಾಷೆಯಲ್ಲಿ ಹೇಳುತ್ತಾರೆ. ಅದನ್ನು ಎಣ್ಣೆಯಲ್ಲಿ ಮುಳುಗಿಸಿ ಬೆಂಕಿಹಚ್ಚಿ ಉವ್ವಾಳಿಸುತ್ತಾರೆ.

ಈ ಆರತಿಗಳ ಅರ್ಥ ಏನು? ಮರಾಠಿ ಭಾಷೆಯಲ್ಲಿ ಸ್ನೇಹ ಅಂದರೆ ಎಣ್ಣೆ, ಸೂತ್ರ ಅಂದರೆ ಬತ್ತಿ (ನೂಲು). ಸ್ನೇಹ ಅಂದರೆ ಗೆಳೆತನ ಯಾ ಆಸಕ್ತಿ, ಪ್ರೀತಿ. ಸೂತ್ರ ಅಂದರೆ ಹಗ್ಗ. ಮನುಷ್ಯನು,

“ಅಹಂಕರೋ ವಿಶಾತಿ ವೃಥಾಭಿಮಾನಃ ಸ್ವಕರ್ಮಸೂತ್ರೇಣ ಗ್ರಥಿತೋಹಿ ಬದ್ಧಃ ॥ “ನಾನೇ ಕರ್ಮಮಾಡುವದೆಂದು ವೃಥಾ ಅಭಿಮಾನ ಎಂಬ ಪಾಶದಿಂದ ಕಟ್ಟಿಕೊಂಡು ಮಾಯಾಪಾಶ, ಆಶಾಪಾಶದಿಂದ ತನ್ನನ್ನು ತಾನೇ ಕಟ್ಟಿಕೊಂಡು ಬಂಧನದಲ್ಲಿ ಬೀಳುತ್ತಾನೆ. ಕರ್ಮಗಳಲ್ಲಿ ಆಸಕ್ತಿ ಮತ್ತು ಅಭಿಮಾನ ಇವೆರಡನ್ನು ದೇವರ ಮುಂದೆ ಸುಟ್ಟು ದೇವರಿಗೆ ಅರ್ಪಣೆಮಾಡುವದು. ಇದಕ್ಕೆ ಆರತಿ ಎಂದು ಹೆಸರು. ಯಾಕೆಂದರೆ, “ಆರ್ತಿ” ಅಂದರೆ ಕಷ್ಟ, ದುಃಖ, ಪೀಡಾ. ಆರ್ತಭಕ್ತ ಅಂದರೆ ಪೀಡಿತ ಭಕ್ತನು. ಭಕ್ತನು ಜ್ಞಾನಜ್ಯೋತಿ ಮಾತ್ರ ತಾನು ಇಟ್ಟುಕೊಂಡು. ಅದರಿಂದ ದೇಹಶುದ್ಧಿ, ಅಹಂ, ಮಮ ಎಲ್ಲಾ ಭಸ್ಮಮಾಡುತ್ತಾನೆ. ಹೀಗೆಯೇ ಸ್ನೇಹಸೂತ್ರ, ಎಣ್ಣೆ ಮತ್ತು ನೂಲನ್ನು ನಾಶಮಾಡುವದು ತೋರಿಸಲಿಕ್ಕೆ ಎಣ್ಣೆಯಲ್ಲಿ ಕೋರದ ತುಂಡು ಮುಳುಗಿಸಿ ಉತ್ಸವದ ಸಮಯ ದೇವರ ಮುಂದೆ ಸುಡುವ ಪದ್ಧತಿ ಉಂಟು. ಅದಕ್ಕೆ ಶೇಲ್ಲೆ ಸುಡುವದೆಂದು ಹೇಳುತ್ತಾರೆ.

ಗರ್ಭಗೃಹದಲ್ಲಿ ದೇವರ ಮುಂದೆ ಒಂದು ಪಾತ್ರೆಯಲ್ಲಿ ಯಾ ಹರಿವಾಣದಲ್ಲಿ ಕೆಂಪು ನೀರಿಟ್ಟು, ಅದರಲ್ಲಿ ದೇವರ ಪ್ರತಿಮೆಯು ಛಾಯೆ ನೋಡುವ ಪದ್ಧತಿ ಹೆಚ್ಚಾಗಿ ಚೌತಿ ಯಾ ಶಿವರಾತ್ರಿ ಸಮಯ ಇರುತ್ತದೆ. ಇದರ ಅರ್ಥ ಏನೆಂದರೆ ರಕ್ತಮಾಂಸ ಇರುವ ಸರ್ವ ಪ್ರಾಣಿಗಳಲ್ಲಿಯೂ (inflesh and blood) ದೇವರನ್ನೇ ನೋಡಿ ಸರ್ವಭೂತೇಂ ಭಗವದ್ಭಾವ ಅಭ್ಯಾಸಿಸಬೇಕೆಂತಲೇ.

ದೇವರ ಪ್ರಸಾದ ಅಂದರೆ ಧನಂ, ಧಾನ್ಯಂ, ಬಹುಪುತ್ರಲಾಭಂ ಮುಂತಾದ ಮಾಯಿಕ ಪದಾರ್ಥ ಭಕ್ತನ ಅಪೇಕ್ಷೆಯಂತೆ ದೇವರು ಕೊಡುತ್ತಾನೆ. ಆದರೆ ತುಕಾರಾಮನ ಹಾಗಿರುವ ಖರೇ ಭಕ್ತನು ದೇವರ ಪ್ರಸಾದ ಬೇಡುವದಿಲ್ಲ. ದೇವರ ಉಚ್ಛಿಷ್ಟ ಅಂದರೆ ದೇವರು ತಿಂದು ಉಳಿದ ಶೇಷ ಮಾತ್ರ ಬೇಡುತ್ತಾನೆ. ದೇವರು ಏನು ತಿನ್ನುತ್ತಾನೆ? ಅವನಿಗೆ ಯಾವ ವಸ್ತುವಿನಲ್ಲಿ ಹಸಿವೆ ಉಂಟು?

“ದೇವ ಭಾವಾಚಾ ಭುಕೇಲಾ” ಭಕ್ತರ ಸದ್ಭಾವ ಮಾತ್ರ.

